# ಮಾನಸಿ

ತಿಂಗಳ ಪತ್ರಿಕೆ ಆಗಸ್ಟ್ 1993

* ಸ್ತ್ರೀ ಚಳುವಳಿಯಲ್ಲಿ ಗ್ರಾಮಾಂತರ ಮಹಿಳೆಯ ಪಾತ್ರ
* ಜರ್ಮೇನ್ ಗ್ರೀರ್
* ಭಾರತೀಯ ಮಹಿಳೆಯ ಬಿಡುಗಡೆಯ ಹಾದಿ
* ಮಹಿಳೆ ಮತ್ತು ಪ್ರವಾಸ
* ಗಂಡನ ಕಟುಕತನಕ್ಕೆ ಬಲಿಯಾದ ಚೇತನ
* ಸ್ತ್ರೀ ಮತ್ತು ಸಮಾನತೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೧೦

ಆಗಸ್ಟ್ - ೧೯೯೩

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ಡಿ.,
ಸವಿತ ಎ., ಗಾಯಿತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

"ಮಾನಸ" ತಿಂಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**

ನಂ–457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೆ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**

ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಬ್ಯಾಂಕ್ ಡ್ರಾಫ್ಟ್, ಎಂ.ಒ. ಗಳನ್ನು ಸಂಪರ್ಕ
ವಿಳಾಸಕ್ಕೆ ಕಳಿಸಿಕೊಡಬೇಕಾಗಿ ಕೋರಿದೆ.


**ಈ ಸಂಚಿಕೆಯಲ್ಲಿ...**




ಈ ಸಂಚಿಕೆಯನ್ನು ಸಂಪಾದಿಸಿದವರು
ಕೆ. ರಾಜೇಶ್ವರಿಗೌಡ

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦೦೬೭



# ಸಂಪಾದಕೀಯ

"ಎಲ್ಲಿ ಹೆಣ್ಣಿನ ಭಾವನೆಗಳು ಚಿಗುರುತ್ತವೋ ಅಲ್ಲಿ ಸಂಸ್ಕೃತಿಯ ಹೆಮ್ಮರ ಬೆಳೆಯುತ್ತದೆ."

21ನೇ ಶತಮಾನದ ಹೊಸ್ತಿಲಿನಲ್ಲಿ ನಿಂತು ಇಂದಿನ ಬದುಕಿನ ಅವಲೋಕನ ಮಾಡಿದ ಯಾವ ಸೂಕ್ಷ್ಮಮತಿಗಾದರೂ ಒಂದು ಪ್ರಶ್ನೆ ಖಂಡಿತ ಎದುರಾಗುತ್ತದೆ. ಅದೇಂದರೆ...."ನಾವು ನಿಜವಾಗಿಯೂ ಸುಸಂಸ್ಕೃತ ನಾಗರಿಕರಾಗಿದ್ದೇವೆಯೇ"? ಎಂಬುದು.

ಒಣ ಆಡಂಬರಕ್ಕೇ ಬೆಲೆಕೊಡುವ, ಭ್ರಮೆಗಳ ಬೆನ್ನಲ್ಲೇ ಬದುಕುವ ಬಹುತೇಕ ಜನರಿಗೆ ಇಂದು ಹಣದಾಹ; ಅದಕ್ಕಾಗಿ ಮೌಲ್ಯಗಳ ಗಾಳಿಪಾಲು.

ಅನಿವಾರ್ಯವಾಗಿ ಹೆಣ್ಣು ದುಡಿಯಬೇಕಾದ ಸಂದರ್ಭ; ಅದನ್ನೇ ಬಂಡವಾಳವಾಗಿಟ್ಟುಕೊಂಡು ಶೋಷಿಸುವ ಬಂಡವಾಳಶಾಹಿ ವ್ಯವಸ್ಥೆ. ಇದರಿಂದಾಗಿ ದುಡಿಮೆಯ ನಾನಾ ಕ್ಷೇತ್ರಗಳಲ್ಲಿ ಹೆಣ್ಣು ಸಾಕಷ್ಟು ಕಿರುಕುಳ ಎದುರಿಸಬೇಕಾಗುತ್ತದೆ. ಸಿನಿಮಾಗಳಲ್ಲಿ, ಜಾಹಿರಾತಿನಲ್ಲಿ ಹೆಣ್ಣನ್ನು ಇಂಚಿಂಚೂ ಬಳಸಿಕೊಳ್ಳುವುದನ್ನು ಕಂಡಾಗ ಈ 'ಜಾಲ'ದ ಅಂತ್ಯ ಯಾವಾಗ? ಎನಿಸುತ್ತದೆ.

ಕಡುಬಡತನ, ನಯವಂಚನೆಗಳಿಗೆ ಬಲಿಯಾಗಿ ಹೋಗುತ್ತಿರುವ ಅಮಾಯಕ ಹೆಣ್ಣುಗಳ ಮಾರಾಟ ಗುಲಾಮಗಿರಿ ವ್ಯವಸ್ಥೆ ಇನ್ನೂ ಗಟ್ಟಿಯಾಗಿರುವುದರ ಪ್ರತೀಕ. ಇದಕ್ಕೆ ವ್ಯತಿರಿಕ್ತವೆಂಬಂತೆ ಕೆಲಸಕ್ಕೆಂದು ಹೋಗುವ, ನಿರ್ಭಿಡೆಯಿಂದ ಬದುಕುತ್ತಿರುವ ಹೆಂಗಸರನ್ನು ಶಂಕೆಯಿಂದ ಸಮಾಜ ನೋಡುತ್ತಿರುವುದು ವಿಷಾದಕರ.

ಗಂಡು ಮಕ್ಕಳನ್ನು ಕಟ್ಟಕ್ಕರೆಯಿಂದ ನೋಡಿಕೊಂಡಂತೆ ಹೆಣ್ಣು ಮಕ್ಕಳನ್ನು ನೋಡಿಕೊಳ್ಳದೆ, ಆಕೆ ಹುಟ್ಟಿರುವುದೇ ಹೊರೆಗೆಲಸ ಮಾಡಲೆಂದು ಬಗೆಯುವ ತಾಯ್ತಂದೆಗಳಿಗೇನೂ ನಮ್ಮಲ್ಲಿ ಕೊರತೆಯಿಲ್ಲ.

ಅತ್ಯಾಚಾರ, ವರದಕ್ಷಿಣೆಗಾಗಿ ಹೆಣ್ಣನ್ನು ಹಿಂಸಿಸಿ, ಬಲಿಪಶು ಮಾಡು

ತ್ತಿರುವುದನ್ನು ಕಂಡಾಗ ಸಮಾಜಕ್ಕೆ ಇನ್ನೂ ಆದಿಮಾನವ ಹಂತವನ್ನು ಬಿಟ್ಟು ಕೊಡುವ ಇಷ್ಟವಿಲ್ಲವೆನಿಸುತ್ತದೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ನಲುಗುತ್ತಿರುವುದನ್ನು ಸಂಪೂರ್ಣತವಾಗಿ ತಪ್ಪಿಸಬೇಕಾಗಿದೆ. ವಿದ್ಯಾಭ್ಯಾಸದಿಂದಾಗಿ ಸ್ತ್ರೀ ಸ್ವಾವಲಂಬಿಯಾಗುವ ಬಗ್ಗೆ ಅರಿವು ಮೂಡಿಸುವುದು, ಹೆಣ್ಣಿಗೆ ಧಕ್ಕೆಯಾಗಬಹುದಾದ ಕೆಲವು ಅನಿಷ್ಟ ಆಚರಣೆಗಳ ಬಗೆಗಿರುವ ಅಜ್ಞಾನವನ್ನು ಹೋಗಲಾಡಿಸುವುದು (ಉದಾ : ಕೆಲವು ಜನಾಂಗಗಳಲ್ಲಿ ಇಂದಿಗೂ ನಡೆಯುತ್ತಿರುವ ಬಾಲ್ಯವಿವಾಹ; ಹೆಂಗಸರು ಮಗುವನ್ನು ಹಡೆದ ಸಂದರ್ಭದಲ್ಲಿ ಅವರನ್ನು ಹಟ್ಟಿಯಿಂದಾಚೆ ಒಂಟಿಯಾಗಿಸುವುದು; ಮಧುರೈ ಜಿಲ್ಲೆಯ 'ಉಸಿಲಂಪಟ್ಟಿ'ಯಂತಹ ಗ್ರಾಮದಲ್ಲಿ ಹೆಣ್ಣು ಕೂಸು ಜನಿಸಿದೊಡನೆ ತಾಯ್ತಂದೆಗಳೇ ಕೊಲ್ಲುವುದು.... ಮುಂತಾದುವು). ಇವೆಲ್ಲದರ ಬಗ್ಗೆ ಗ್ರಾಮೀಣ ನಗರ ಪರಿಸರಗಳಲ್ಲಿ ಸ್ತ್ರೀವಾದಿಗಳು ಜಾಗೃತಿ ಮೂಡಿಸುವ ಚಟುವಟಿಕೆಗಳಿಗೆ ಬೆಂಬಲಿಸುವುದು ಮಾನವೀಯತೆಯ ಬಗ್ಗೆ ಗೌರವವಿರುವ ಉದಾತ್ತವಾದಿಗಳ ಕರ್ತವ್ಯ.

ಸ್ತ್ರೀವಾದಿಗಳು ಪುರುಷದ್ವೇಷಿಗಳಲ್ಲ; ಅತಿರೇಕವಾದಿಗಳಲ್ಲ. ದಬ್ಬಾಳಿಕೆ, ಶೋಷಣೆಗೆ ಒಳಗಾದ ಹೆಣ್ಣಿಗೆ ಬದುಕು ಕೊಡಲು ಬಯಸುವವರು.

ಪುರುಷನಿಗೆ ದೊರೆಯುವ ಎಲ್ಲ ಹಕ್ಕುಗಳೂ ಸ್ತ್ರೀಯರಿಗೂ ಸಿಗಬೇಕೆಂದು ಸ್ತ್ರೀ ಹಿತದೃಷ್ಟಿಯಿಂದ ಕಾನೂನು ಇದೆ. ಆದರೆ ನಮಗೆ ಕಾನೂನು, ಸಂಘಟನೆಗಳಾಚೆ ನಿಜವಾಗಿ ಬೇಕಾಗಿರುವುದು ಪ್ರೀತಿ, ಮಾನವೀಯ ಚಿಂತನೆ.

ಎಲ್ಲಿಯವರೆಗೆ ಹೆಣ್ಣನ್ನು ಗೌರವಿಸಿ, ಆಕೆ ನೆಮ್ಮದಿ, ಸಂತೋಷದಿಂದಿರುವಂತೆ ಮಾಡಲಾಗುವುದಿಲ್ಲವೋ ಅಲ್ಲಿಯವರೆಗೂ ನಾವು ಕತ್ತಲಯುಗದಲ್ಲಿಯೇ ಬದುಕುತ್ತೇವೆ. ಆ ದಿಸೆಯಲ್ಲಿ ನಾವೆಲ್ಲರೂ ಮೊದಲು ಸಮಾನತೆಯನ್ನು ಪ್ರೀತಿಸುವ ಮನುಷ್ಯರಾಗೋಣ; ಬೆಳಕಿನ ಸಮಾಜ ನಿರ್ಮಾಣ ಮಾಡೋಣ.

ಕೆ. ರಾಜೇಶ್ವರಿಗೌಡ

## ಕ್ರೂರತೆಯ ಹೊಸ ಮಾದರಿ

ಮಾನವ ಕ್ರೌರ್ಯದ ಹೊಸ ಮಾದರಿಯೊಂದು ಇತ್ತೀಚೆಗೆ ವರದಿಯಾಗಿದೆ.... ಮದರಾಸಿನ ಪಳನಿಸ್ವಾಮಿ ಎಂಬವನು ತನ್ನ ಗರ್ಭಿಣಿ ಸೊಸೆಯ ಬಾಯಿಗೆ ಬಟ್ಟೆ ತುರುಕಿ ಆಕೆಯನ್ನು ಕುರ್ಚಿಗೆ ಕಟ್ಟಿಹಾಕಿ, ಆ ಕೋಣೆಯಲ್ಲಿ ವಿಷದ ಹಾವೊಂದನ್ನು ಬಿಟ್ಟ. ಅದು ಹೇಗೋ ಅವಳು ಬಾಯಿಯ ಬಟ್ಟೆ ಕಿತ್ತು ಕಿರುಚಿಕೊಂಡದ್ದು ಕೇಳಿ ಅಕ್ಕಪಕ್ಕದವರು ಬಂದು ಮಾವನನ್ನು ಪೋಲೀಸಿಗೆ ಹಿಡಿದುಕೊಟ್ಟಾಗ ತನ್ನ ಮಗನಿಗೆ ಇನ್ನೊಂದು ಮದುವೆ ಮಾಡಿ ವರದಕ್ಷಿಣೆ ತೆಗೆದುಕೊಳ್ಳುವುದೇ ತನ್ನ ಉದ್ದೇಶವಾಗಿತ್ತೆಂದು ಒಪ್ಪಿಕೊಂಡಿದ್ದಾನೆ. ಹಾಗೆಂದರೆ ಇವರ್‍ಯಾರೂ ಹಳ್ಳಿ ಗಮಾರರಲ್ಲ. ತಂದೆ ನಾಟಿ ವೈದ್ಯ, ಮಗ MBBS ಡಾಕ್ಟರ್.

# "ಸ್ತ್ರೀ ಚಳುವಳಿಗಳಲ್ಲಿ ಗ್ರಾಮಾಂತರ ಮಹಿಳೆಯರ ಪಾತ್ರ"

ಸುಮನ ಸಿ. ಮೋಹನ್

ನಗರ ಪ್ರದೇಶದ ಮಹಿಳೆಯರಿಗೆ ಹೋಲಿಸಿದರೆ ಗ್ರಾಮಾಂತರ ಪ್ರದೇಶದ ಮಹಿಳೆಯರ ಜೀವನ ಮಟ್ಟ ಜೀವನ ವಿಧಾನಗಳು ಹಲವು ರೀತಿಯಲ್ಲಿ ಬೇರೆಯಾಗಿರುತ್ತದೆ. ವಿದ್ಯಾಭ್ಯಾಸದ ದೃಷ್ಟಿಯಿಂದಲೂ ನಗರ ಪ್ರದೇಶದಲ್ಲಿರುವ ಮಹಿಳೆಯರಿಗೆ ದೊರಕುವಷ್ಟು ಅವಕಾಶಗಳು ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ದೊರಕುವುದಿಲ್ಲ. ಕಾರ್ಯನಿರತ ಮಹಿಳಾ ಸಂಘಟನೆಗಳೂ ಕೂಡ ಸಾಧಾರಣವಾಗಿ ನಗರಗಳಲ್ಲಿಯೇ ಹೆಚ್ಚು ಹೆಚ್ಚು ಕೇಂದ್ರೀಕೃತವಾಗಿರುತ್ತದೆ. ಅಂದ ಮಾತ್ರಕ್ಕೆ ಗ್ರಾಮೀಣ ಪ್ರದೇಶದ ಮಹಿಳೆಯರು ಸಂಪೂರ್ಣವಾಗಿ ಸ್ತ್ರೀ ಚಳುವಳಿಗಳಿಂದ ದೂರ ಉಳಿದಿರುತ್ತಾರೆಂದೇನೂ ತಿಳಿಯಬೇಕಾದ್ದಿಲ್ಲ. ಹಾಗೆ ನೋಡಿದರೆ ಗ್ರಾಮೀಣ ಪ್ರದೇಶದ ಮಹಿಳೆಯರು ಸುಸಂಘಟಿತರಾದರೆ ಅತ್ಯಂತ ಪರಿಣಾಮಕಾರಿಯಾದ ಕೆಲಸವನ್ನ ಮಾಡಲು ಸಾಧ್ಯವಿರುತ್ತದೆ.

ನಗರದ ಸ್ಥಿತಿ-ಗತಿಗಳು ಸಹಜವಾಗಿ ಅಲ್ಲಿನ ಮಹಿಳೆಯರ ಜೀವನ ರೀತಿಯ ಮೇಲೂ ಪರಿಣಾಮ ಬೀರುತ್ತವೆ. ಅಲ್ಲಿನ ಮಹಿಳೆಯರು ಬಹಳಷ್ಟು ಸ್ವತಃ ಉದ್ಯೋಗಿಗಳಾಗಿರುತ್ತಾರೆ ಇಲ್ಲವೇ ಉದ್ಯೋಗಸ್ಥ ಕುಟುಂಬಗಳ ಸದಸ್ಯರಾಗಿರುತ್ತಾರೆ. ಈ ಪರಿಸ್ಥಿತಿಯಲ್ಲಿ ಒಬ್ಬ ಮಹಿಳೆ ಎಷ್ಟೇ ಬುದ್ಧಿವಂತಳಾಗಿದ್ದರೂ ಸಾಮಾಜಿಕ ಕೆಲಸ ಕಾರ್ಯಗಳಲ್ಲಿ ತನ್ನನ್ನ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುವುದು ಅಸಾಧ್ಯವಾಗಿರುತ್ತದೆ. ಮಧ್ಯಮ ವರ್ಗದ ಮಹಿಳೆಯರಿಗಂತೂ ಸಾಧ್ಯವೇ ಇರುವುದಿಲ್ಲ. ಕೇವಲ ಶ್ರೀಮಂತ ವರ್ಗದ ಮಹಿಳೆಯರು ಮಾತ್ರ ಮಹಿಳಾ ಸಂಘಟನೆಗಳಲ್ಲಿ ಭಾಗವಹಿಸುವುದು ಸಾಧ್ಯವಾಗಬಹುದೆಂದು ತೋರುತ್ತದೆ. ಇದರಿಂದ ಉಂಟಾಗುವ ಒಂದು ಅಪಾಯವೆಂದರೆ ಅಂಥ ಸಂಘಟನೆಗಳು ಸಾಮಾನ್ಯವಾಗಿ ಮಧ್ಯಮ ವರ್ಗದ ಮತ್ತು ಇತರ ಮಹಿಳಾ ಸದಸ್ಯರಿಂದ ದೂರವಾಗಿ ಕೇವಲ ಪ್ರತಿಷ್ಠಿತರ ಗುಂಪಾಗಿ ಬಿಡಬಹುದು. ಆದರೆ ಗ್ರಾಮಾಂತರ ಪ್ರದೇಶದಲ್ಲಿ ಒಂದು ಮಹಿಳಾ ಸಂಘ-ಸಂಸ್ಥೆಗಳ ಸಂಘಟನೆಯಾದರೆ ಅಂತಹ ಸಂಘಗಳಲ್ಲಿ ಎಲ್ಲ ವರ್ಗದ ಮಹಿಳೆಯರನ್ನು ಅದು ಒಳಗೊಳ್ಳುವ ಸಾಧ್ಯತೆ ಇರುತ್ತದೆ. ಅಲ್ಲದೆ ನಗರಗಳಲ್ಲಿ ಸಾಧ್ಯವಾಗದೇ ಇರುವ ವೈಯಕ್ತಿಕ ಸಂಬಂಧಗಳು ಮತ್ತು ಪರಸ್ಪರ ಅರಿವು ಗ್ರಾಮೀಣ ಪ್ರದೇಶಗಳಲ್ಲಿ ಸಾಧ್ಯವಾಗುತ್ತದೆ. ಗ್ರಾಮಾಂತರ ಪ್ರದೇಶದವರ ಸಮಸ್ಯೆಗಳು ಕೂಡ ನಗರ ಪ್ರದೇಶದವರಲ್ಲಿನಂತೆ ವೈಯಕ್ತಿಕವಾಗಿ ಇರದೆ, ಬಹುತೇಕ ಸಾಮಾನ್ಯ ಸ್ವರೂಪದಲ್ಲಿ ಇರುವುದರಿಂದ ಪರಸ್ಪರ ಅರಿವಿಗೂ ಸಹಾಯಕವಾಗುತ್ತದೆ.

ಗ್ರಾಮಾಂತರ ಪ್ರದೇಶದ ಮಹಿಳೆಯರು ಸಹಜವಾಗಿ ಕುಟುಂಬದ ದುಡಿಮೆಯಲ್ಲಿ ಪಾಲ್ಗೊಂಡಿರುತ್ತಾರೆ. ಅದರ ಜತೆಗೆ ಸುತ್ತ ಮುತ್ತಲಿನ ಜನರ ಸಮಸ್ಯೆಗಳ ಬಗ್ಗೆ, ಕಷ್ಟ-ಕಾರ್ಪಣ್ಯಗಳ ಬಗ್ಗೆ ಗೊತ್ತಿರುತ್ತದೆ. ಅಗತ್ಯ ಬಿದ್ದಾಗ ಪರಸ್ಪರ ನೋವು-ನಲಿವುಗಳಲ್ಲಿ ಪಾಲುದಾರರಾಗುವ ಸಲಿಗೆ ಮತ್ತು ಬಿಡುವುಗಳೂ ಕೂಡ ಇರುತ್ತವೆ. ಇಂತಹ ಸನ್ನಿವೇಶದಲ್ಲಿ ಗ್ರಾಮೀಣ ಪ್ರದೇಶದ ಮಹಿಳೆಯರು ಸಂಘಟಿಕರಾಗಿ ಕಾರ್ಯಕ್ರಮವನ್ನು ಹಾಕಿಕೊಂಡರೆ ಉತ್ತಮವಾದ್ದುದನ್ನ ಸಾಧಿಸಲು ಖಂಡಿತ ಸಾಧ್ಯವಿದೆ. ಆದರೆ ಸಂಘಟನೆಯ ಕೊರತೆ ಹಾಗೂ ಅಗತ್ಯ ವಿದ್ಯಾಭ್ಯಾಸದ ಕೊರತೆ ಕೆಲವು ಸಾರಿ ಗ್ರಾಮೀಣ ಪ್ರದೇಶದ ಮಹಿಳೆಯರ ಆಂತರಿಕ ಶಕ್ತಿ ಮತ್ತು ಪ್ರತಿಭೆಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಅಡ್ಡಿಯಾಗಿವೆ. ಸುಶಿಕ್ಷಿತ ಮಹಿಳೆಯರು ಗ್ರಾಮೀಣ ಪ್ರದೇಶದ ಮಹಿಳೆಯರೊಂದಿಗೆ ಸೇರಿಕೊಂಡು ಅವರಿಗೆ ಅವರಲ್ಲಿ ಅಡಗಿರುವ ಶಕ್ತಿ ಮತ್ತು ಪ್ರತಿಭೆಗಳನ್ನ ಅರ್ಥಮಾಡಿಸಬೇಕು. ಅವರನ್ನು ಸುಸಂಘಟಿಕರನ್ನಾಗಿ ಮಾಡುವುದರ ಜತೆಗೆ ಸಮಾಜ ಮತ್ತು ಕುಟುಂಬಗಳ ಬಗ್ಗೆ ಗ್ರಾಮೀಣ ಮಹಿಳೆಯರಲ್ಲಿ ಇರಬೇಕಾದ ಸೂಕ್ಷ್ಮ ಭಾವನೆಗಳಿಗೆ ಪೆಟ್ಟು ತಗಲದಂತೆ, ಆದರೆ ಸುತ್ತಮುತ್ತಲಿನ ವಿನಾ ಕಾರಣವಾದ ಅನ್ಯಾಯ, ಅಸಮಾನತೆಗಳನ್ನು ಅರ್ಥ– ಮಾಡಿಕೊಂಡು ಅದಕ್ಕೆ ಸೂಕ್ತವಾದ ರೀತಿಯಲ್ಲಿ ಪ್ರತಿಭಟಿಸುವಂತೆ ಪ್ರಚೋದಿಸಬೇಕಾಗಿದೆ.

ಪ್ರಾದೇಶಿಕ ಪರಿಸ್ಥಿತಿಯನ್ನು ಅನುಸರಿಸಿ ಅದರ ಅಗತ್ಯಗಳ ಅನುಸಾರ ರೇಷ್ಮೆ ಸಾಕಣೆ, ಕೋಳಿ ಸಾಕಣೆ, ಜೇನು

ಸಾಕಣೆ ಹಾಗೂ ಮತ್ತಿತರ ಕೃಷಿ ಸಂಬಂಧಿ ವಿಷಯಗಳ ಬಗ್ಗೆ ಮಾಹಿತಿಯನ್ನು ನೀಡಿ ತರಬೇತಿಯನ್ನು ನೀಡಿದಲ್ಲಿ ಗ್ರಾಮೀಣ ಮಹಿಳೆಯರು ಹೆಚ್ಚೆಚ್ಚು ಪ್ರಯೋಜನಕಾರಿಯಾಗಿ ತಮ್ಮ ಶಕ್ತಿಯನ್ನು ಬಳಸಿಕೊಳ್ಳಲು ಸಹಾಯಕವಾಗುತ್ತದೆ. ಈ ದಿಕ್ಕಿನಲ್ಲಿ ಬ್ಯಾಂಕುಗಳು ಮತ್ತು ಸರ್ಕಾರದ ನೆರವು ಮತ್ತು ಸಹಕಾರಗಳನ್ನು ದೊರಕಿಸಿಕೊಡುವ ಬಗೆಗೂ ಮಹಿಳಾ ಸಂಘಟನೆಗಳು ಮಾರ್ಗದರ್ಶನ ನೀಡಬೇಕಾಗಿದೆ.

ಸಹಕಾರಿ , ಚಳುವಳಿಯ ಅಂಗವಾಗಿ ಕರ್ನಾಟಕದ ಬಹಳಷ್ಟು ಭಾಗಗಳಲ್ಲಿ ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡು ಕೆಲಸ ಮಾಡುತ್ತಿರುವುದನ್ನು ಇಲ್ಲಿ ಗಮನಿಸಬಹುದು. ಬಿಜಾಪುರ ವಿಭಾಗದ ಮಹಿಳಾ ಸಹಕಾರ ಸಂಘದ ಸದಸ್ಯರು ಸಿದ್ಧ ಆಹಾರ ವಸ್ತುಗಳ ತಯಾರಿಕಾ ಕಾರ್ಯವನ್ನು ಆರಂಭಿಸಿ ಈಗ ಸಮರ್ಥವಾಗಿ ನಿರ್ವಹಿಸುತ್ತಿದ್ದಾರೆ. ಹಾಗೆಯೇ ಬೆಳಗಾಂ ಮತ್ತು ಧಾರವಾಡ ವಿಭಾಗದಲ್ಲಿ ಕಾರ್ಯ ನಿರತವಾಗಿರುವ ಕೆಲವು ಮಹಿಳಾ ಸಂಘಟನೆಗಳು ಸಾಮಾಜಿಕ ಪೀಡೆಯಾದ ದೇವದಾಸಿ ಪದ್ಧತಿಯನ್ನು ತೊಡೆದು ಹಾಕಲು ತಮ್ಮದೇ ಆದ ವಿಶಿಷ್ಟ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ದೇವದಾಸಿ ಪದ್ಧತಿಯಿಂದ ವಿಮುಕ್ತರಾದ ಹೆಣ್ಣು ಮಕ್ಕಳಿಗೆ ತಮ್ಮ ಕಾಲ ಮೇಲೆ ತಾವು ನಿಲ್ಲಬಲ್ಲ ಶಕ್ತಿ ಬರುವಂತೆ ಮಾಡಲು ಅವರಿಗಾಗಿ ಹಾಸ್ಟೆಲ್ಲುಗಳನ್ನು ಸ್ಥಾಪಿಸಿ ಅಲ್ಲಿ ವೃತ್ತಿ ತರಬೇತಿ ನೀಡುವುದರ ಮೂಲಕ ಅವರ ಮುಂದಲ ಭವಿಷ್ಯವನ್ನು ಉಜ್ವಲವಾಗಿಸುತ್ತಿದ್ದಾರೆ. ಕನಕಪುರ ತಾಲ್ಲೂಕಿನ ಹಾರೋಹಳ್ಳಿಯಲ್ಲಿರುವ ಗ್ರಾಮೀಣ ಮಹಿಳೆಯರ ಸ್ವ-ಉದ್ಯೋಗ ತರಬೇತಿ ಸಂಸ್ಥೆ, ಬಿಡದಿಯ ಕರಕುಶಲ ಕರ್ಮಿಗಳ ತರಬೇತಿ ಮತ್ತು ಮಾರಾಟ ವ್ಯವಸ್ಥೆ ಸಂಸ್ಥೆ ಮುಂತಾದುವುಗಳ ಕಾರ್ಯಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಹೊಸಕೋಟೆ ತಾಲ್ಲೂಕಿನ ಸೊಣ್ಣಳ್ಳಿಪುರ ಗ್ರಾಮ ಹಾಗೂ ಸೋಂಪುರ ಗ್ರಾಮಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳ ಸಹಕಾರದೊಂದಿಗೆ ಹಾಕಿಕೊಂಡಿರುವ ಯೋಜನಾ ಕಾರ್ಯಕ್ರಮಗಳು ಕೂಡಾ ಇದೇ ರೀತಿಯವು.

ಗುಜರಾತ್ ರಾಜ್ಯದ 'ಸೇವಾ' ಮಹಿಳಾ ಸಂಘ, ಸಂಘಟನೆಗಳ ಸ್ಫೂರ್ತಿಯಿಂದ ಅನೇಕ ಯೋಜನೆಗಳನ್ನು ಹಾಕಿಕೊಂಡು ಕಾರ್ಯ ನಿರ್ವಹಿಸುತ್ತಿದೆ. ಮಹಿಳೆಯರಿಗಾಗಿಯೇ ಇಲ್ಲಿ ನೀಡುವ ವೃತ್ತಿ ತರಬೇತಿ ಕಾರ್ಯಗಳು ಮಹಿಳೆಯರಲ್ಲಿ ಜಾಗೃತಿ ಮತ್ತು ಸ್ವಾವಲಂಬಿತ್ವವನ್ನು ಗಳಿಸಿಕೊಡುತ್ತಿದೆ. ಇಷ್ಟೇ ಸಂಸ್ಥೆಯ ನೆರವಿನಿಂದ ಗುಜರಾತಿನ ಕೆಲವು ಭಾಗಗಳಿಗೆ ಭೇಟಿಕೊಟ್ಟು ಅಲ್ಲಿನ ಮಹಿಳಾ ಸಂಘಟನೆಗಳ ಕಾರ್ಯಗಳನ್ನು ಪರಿಚಯಿಸಿಕೊಳ್ಳುವ ಅವಕಾಶ ನನಗೆ ಒದಗಿತ್ತು. ಆ ಸಂದರ್ಭದಲ್ಲಿ ಅಲ್ಲಿ ಗ್ರಾಮಾಂತರ ಪ್ರದೇಶದಲ್ಲಿನ ಮಹಿಳೆಯರ ಸಾಧನೆಗಳು ಮತ್ತು ಜಾಗೃತಿಯ ಬಗ್ಗೆ ಕಣ್ಣಾರೆ ಕಂಡು ಮೆಚ್ಚಿಕೊಳ್ಳುವಂತಾಯಿತು. ಇಂಥ ಕಾರ್ಯಕ್ರಮಗಳು ನಮ್ಮ ರಾಜ್ಯದ ಗ್ರಾಮಾಂತರ ಪ್ರದೇಶದ ಮಹಿಳೆಯರ ಸಂಘಟನೆಗಳಿಗೂ ಮಾದರಿಗಳಾಗಬೇಕು. ಗುಜರಾತ್ ರಾಜ್ಯದ ಶೇರಥಾ ಗ್ರಾಮದಲ್ಲಿ ಗೌಳಿಗ ಕಸುಬಿನ ಜನರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಇಲ್ಲಿ ಹಾಲು ಉತ್ಪಾದನಾ ಸಹಕಾರ ಸಂಘ ಮತ್ತು ಮಾರಾಟ ವ್ಯವಸ್ಥೆ ಮುಂತಾದುವೆಲ್ಲಾ ಮಹಿಳೆಯರ ವಶದಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿವೆ. ಗೃಹಕೃತ್ಯಗಳ ಜವಾಬ್ದಾರಿಗಳನ್ನೂ ನಿರ್ವಹಿಸಿ, ಮಕ್ಕಳನ್ನು ಶಾಲೆಗೆ ಕಳಿಸಿದ ನಂತರ ಕೃಷಿ ಕಾರ್ಯಗಳಲ್ಲೂ ಗಂಡನಿಗೆ ನೆರವಾಗುತ್ತಾರೆ. ಬೆಳಿಗ್ಗೆ ಮತ್ತು ಸಂಜೆ ತಮ್ಮ ತಮ್ಮ ಹಸುಗಳಲ್ಲಿ ಹಾಲನ್ನು ಕರೆದು ಅದನ್ನು ಸ್ವತಃ ತಾವೇ ಮಾರಾಟ ಸಂಸ್ಥೆಗಳಿಗೆ ಸರಬರಾಜು ಮಾಡಿ ಅದಕ್ಕೆ ಸಂಬಂಧಿಸಿದ ಎಲ್ಲ ವ್ಯವಹಾರಗಳನ್ನು ಸುಸಂಘಟಿತ ಸಹಕಾರಿ ಸಂಘಗಳ ಮೂಲಕ ತಾವೇ ನಿರ್ವಹಿಸುತ್ತಾರೆ. ಹಾಗೆಯೇ ಇದೇ ರಾಜ್ಯದ ಆನಂದ ಎಂಬ ಗ್ರಾಮದಲ್ಲಿ ಟಿ.ಕೆ. ದಾಸ್ ಪೌಂಡೇಶನ್ ನೇತೃತ್ವದಲ್ಲಿ ಮಹಿಳೆಯರ ಸಂಘಟನೆಗಳು ಕರಕುಶಲ ವಸ್ತುಗಳ ತಯಾರಿಕೆ ಮತ್ತು ವೈದ್ಯಕೀಯ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿರುವುದನ್ನು ಕಂಡಿದ್ದೇನೆ.

ಸೂಕ್ತ ಸಂಘಟನೆಗಳ ಕೊರತೆಯಿಂದಾಗಿ ಗ್ರಾಮೀಣ ಮಹಿಳಾ ಸಮುದಾಯ ತನ್ನ ಸಾಮರ್ಥ್ಯವನ್ನು ಸರಿಯಾದ ರೀತಿಯಲ್ಲಿ ಪ್ರಕಟಗೊಳಿಸಲು ಸಾಧ್ಯವಾಗುತ್ತಿಲ್ಲ ಎಂಬುದು ಸತ್ಯ ಸಂಗತಿಯಾಗಿದ್ದರೂ, ಸರಿಯಾದ ರೀತಿಯಲ್ಲಿ ಸಂಘಟಿತವಾಗಿ ಉತ್ತಮ ಮಾರ್ಗದರ್ಶನ ದೊರಕಿದಲ್ಲಿ ಅದ್ಭುತ ಸಾಧನೆಗಳನ್ನು ಮಾಡಬಹುದೆಂಬುದರಲ್ಲಿ ಸಂಶಯವಿಲ್ಲ. ಗ್ರಾಮೀಣ ಮಹಿಳಾ ಸಂಘಟನಾ ಚಳುವಳಿಗಳಿಗೆ ಸಾರ್ವಜನಿಕರಿಂದ ಸ್ವಯಂ ಪ್ರೇರಿತ ಸಹಕಾರ ಮತ್ತು ಪ್ರೋತ್ಸಾಹಗಳು ಖಂಡಿತವಾಗಿಯೂ

ಸಿಗುತ್ತವೆ. ತಮ್ಮ ವಿಶಿಷ್ಟತೆಯಿಂದಾಗಿ ಯಾವುದೇ ಮಹಿಳಾ ಚಳುವಳಿಗಳೂ ಕೂಡ ಸರ್ಕಾರ ಮತ್ತು ಸಾರ್ವಜನಿಕರ ಗಮನ ತಕ್ಷಣ ಸೆಳೆಯುತ್ತದೆ ಎಂಬುದು ನನ್ನ ಅನುಭವಕ್ಕೆ ಬಂದಿರುವ ಸಂಗತಿಯಾಗಿದೆ. ಹೊಸಕೋಟೆಯಲ್ಲಿ ಅಂತರ್ ರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಇಲ್ಲಿನ ಮಹಿಳಾ ಸಮಾಜದ ಕೆಲ ಸದಸ್ಯರು ಸಾರ್ವಜನಿಕರ ಸಾರಿಗೆ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ರಸ್ತೆ ತಡೆ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೆವು. ಆರಂಭದಲ್ಲಿ ಕೆಲವೇ ಮಹಿಳೆಯರು ಮಾತ್ರ ಇದ್ದು ಸ್ವಲ್ಪಮಟ್ಟಿಗೆ ಆತಂಕವನ್ನು ಉಂಟುಮಾಡಿತು. ಆದರೆ ಅನಂತರದಲ್ಲಿ ಸಾರ್ವಜನಿಕರು ನೀಡಿದ ಸ್ವಪ್ರೇರಿತ ಬೆಂಬಲದಿಂದಾಗಿ ನಮಗೆಲ್ಲಾ ಧೈರ್ಯ ಬಂದು ನಮಗೆ ಯಶಸ್ಸು ಉಂಟಾಯಿತು.

ಒಟ್ಟಿನಲ್ಲಿ ಗ್ರಾಮಾಂತರ ಮಹಿಳೆಯರು ಸುಸಂಘಟಿತರಾದಲ್ಲಿ ಅರ್ಥಪೂರ್ಣವಾದ ಸ್ತ್ರೀ ಚಳುವಳಿಗಳನ್ನು ಸಮರ್ಥವಾಗಿ ನಡೆಸಬಹುದೆಂದು ನನಗನ್ನಿಸಿದೆ. ಕೇವಲ ಘೋಷಣೆಯ ಮಹಿಳಾ ಸ್ವಾತಂತ್ರ್ಯದ ಕಲ್ಪನೆಯನ್ನು ಮೀರಿದ ನಿಜವಾದ ಮಹಿಳಾ ಘನತೆಯನ್ನು ಸಾಮಾಜಿಕವಾಗಿ ತಂದುಕೊಡಬಲ್ಲ ಚಳುವಳಿಗಳನ್ನು ಗ್ರಾಮಾಂತರ ಮಹಿಳೆಯರು ಸಂಘಟಿಸಬಹುದು.

## ವೈಮಾನಿಕ ದಳದಲ್ಲಿ 'ಮಹಿಳಾ ಸೆಲ್'

ಭಾರತೀಯ ವೈಮಾನಿಕ ದಳದಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರ ಮೇಲೆ ನಡೆಯುವ ಲೈಂಗಿಕ ಹಿಂಸೆ, ಕೆಲಸದ ಸ್ಥಳದಲ್ಲಿ ಇರುವ ತಾರತಮ್ಯ ಹಾಗೂ ಅವರಿಗೆ ಉತ್ತಮ ಸೌಲಭ್ಯ ಒದಗಿಸುವ ಉದ್ದೇಶದಿಂದ ಭಾರತೀಯ ವೈಮಾನಿಕ ದಳ 'ಮಹಿಳಾ ಸೆಲ್' ಒಂದನ್ನು ಸ್ಥಾಪಿಸಿದೆ.

ವೈಮಾನಿಕ ದಳದಲ್ಲಿ ಅತ್ಯಂತ ಹಿರಿಯ ಮಹಿಳಾ ಅಧಿಕಾರಿಯಾಗಿರುವ ಸುಷ್ಮಾ ಚಾವ್ಲಾ ಈ 'ಮಹಿಳಾ ಸೆಲ್'ನ ಮುಖ್ಯಸ್ಥೆಯಾಗಿ ನೇಮಕಗೊಂಡಿದ್ದಾರೆ. ರಾಷ್ಟ್ರೀಯ ಮಹಿಳಾ ಆಯೋಗ ರೂಪಿಸಿರುವ ನೀತಿ-ಸಂಹಿತೆಗಳ ಹಿನ್ನೆಲೆಯಲ್ಲಿ ಈ 'ಮಹಿಳಾ ಸೆಲ್' ರೂಪುಗೊಂಡಿದೆ.

ವೈಮಾನಿಕ ದಳದಲ್ಲಿ ಒಟ್ಟು 2841 ಮಹಿಳೆಯರು ವಿವಿಧ ರೀತಿಯ ಕೆಲಸಗಳಲ್ಲಿ ತೊಡಗಿರುತ್ತಾರೆ. ಚಾಲಕರಾಗಿ, ವಿಮಾನದಲ್ಲಿ ಅತಿಥಿಗಳ ಸ್ವಾಗತಿಸುವವರಾಗಿ, ಸೇವಕಿಯರಾಗಿ, ಮ್ಯಾನೇಜರ್-ಹೀಗೆ ಹಲವಾರು ಬಗೆಯ ಕೆಲಸಗಳನ್ನು ಮಹಿಳೆಯರು ನಿರ್ವಹಿಸುತ್ತಿದ್ದಾರೆ.

ಈ 'ಮಹಿಳಾ ಸೆಲ್' —ಮಹಿಳಾ ಕಾರ್ಮಿಕರಿಗೆ ಸಂಬಂಧ ಪಡುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿಯೋಜಿಸುತ್ತಿದೆ. ಮಹಿಳಾ ಕಾರ್ಮಿಕರಿಗೆ ಅವರ ಹಕ್ಕು ಹಾಗೂ ಪಾತ್ರಗಳನ್ನು ಕುರಿತಂತೆ ಹಲವಾರು ಅಲ್ಪ ಅವಧಿಯ ಕಾರ್ಯಕ್ರಮಗಳನ್ನೂ, ಕಾರ್ಯಾಗಾರಗಳನ್ನೂ ನಡೆಸುವಂತಹ ಯೋಜನೆಗಳನ್ನು ಈ 'ಮಹಿಳಾ ಸೆಲ್' ಸದ್ಯಕ್ಕೆ ರೂಪಿಸಿಕೊಂಡಿದೆ. ಮಹಿಳಾ ಕಾರ್ಮಿಕರು ತಮ್ಮ ಹಕ್ಕುಗಳ ಬಗ್ಗೆ ಪ್ರಜ್ಞೆ, ಪೂರ್ವಪರತೆ ಹೊಂದಿರುವುದು ಮುಖ್ಯ ಎಂದು ಇವರ ಅಭಿಪ್ರಾಯ.

'ರಾಷ್ಟ್ರೀಯ ಮಹಿಳಾ ಆಯೋಗ' ರೂಪಿಸಿರುವ ಈ ನೀತಿ-ಸಂಹಿತೆಗಳು ಮಹಿಳಾ ಕಾರ್ಮಿಕರಿಗೆ ಮಾತ್ರ ಅಭಿವೃದ್ಧಿ ಯೋಜನೆಗಳನ್ನು ಹಾಕಿಕೊಳ್ಳುವುದಿಲ್ಲ. ಅವರು ರೂಪಿಸಿರುವ ಅಭಿವೃದ್ಧಿ ಯೋಜನೆಗಳು ಮಹಿಳಾ ಕಾರ್ಮಿಕರ ಕುಟುಂಬಗಳಿಗೂ ಅನ್ವಯಿಸುವಂತವಾಗಿವೆ.

# ಜರ್ಮೇನ್‌ಗ್ರೀರ್–ಒಂದು ಪರಿಚಯ

ಎಸ್. ಕೆ. ಶ್ಯಾಮಲಾ

ಸ್ತ್ರೀವಾದ ಮತ್ತು ಸ್ತ್ರೀವಾದಿ ಚಳುವಳಿ ಹುಟ್ಟಿದ್ದು ಹತ್ತೊಂಭತ್ತನೇ ಶತಮಾನದ ಮಧ್ಯಕಾಲದಲ್ಲಿ. ಆದರೆ-ಅದರ ತೀವ್ರತೆ ಮಹಿಳೆಯರಿಗೆ ಮತದಾನದ ಹಕ್ಕು ಮತ್ತು ರಾಜಕೀಯ ಸ್ವಾತಂತ್ರ್ಯ ಕೊಡಿಸುವುದಕ್ಕೆ ಮಾತ್ರ ಸೀಮಿತವಾಗಿತ್ತು. ಮತದಾನದ ಹಕ್ಕಿಗಾಗಿ ಹೋರಾಡಿದ ಮಹಿಳೆಯರು ಪಟ್ಟಭದ್ರವಾದ ವಿವಾಹ ಸಂಸ್ಥೆ, ಸಮಾಜದ ನೀತಿ ಸಂಹಿತೆ ಅಥವಾ ಧರ್ಮದ ಬುಡಕಟ್ಟನ್ನು ಅಲ್ಲಾಡಿಸಲು ಪ್ರಯತ್ನಿಸಲಿಲ್ಲ. ಪಂಜರದ ಬಾಗಿಲೇನೋ ತೆರೆದಿತ್ತು. ಆದರೆ ಅದರೊಳಗಿನ ಗಿಣಿ ಹೊರಗೆ ಹಾರಲು ನಿರಾಕರಿಸಿತ್ತು." ಸ್ತ್ರೀವಾದದ ಈ ಮೊದಲ ಅಲೆ ಸುಧಾರಣೆಗಾಗಿ ಎದ್ದಿತೇ ಹೊರತು ಕ್ರಾಂತಿಗಾಗಿ ಅಲ್ಲ. 1970ರಲ್ಲಿ ಎದ್ದ ಎರಡನೇ ಅಲೆ, ಸ್ತ್ರೀಯರು ತಮ್ಮ ಸ್ಥಾನಮಾನಗಳ ಬಗ್ಗೆ ಎಷ್ಟು ಜಾಗರೂಕರಾಗಿದ್ದರು ಎಂಬುದನ್ನು ಪ್ರತಿಬಿಂಬಿಸಿತು. ಬಹುಶಃ ಈ ವೇಳೆಗೆ ಸ್ತ್ರೀಯರು ಅನಪೇಕ್ಷಿತ ತಾಯ್ತನ ಹಾಗೂ ಕಠಿಣ ದೇಹಶ್ರಮದಿಂದ ಮುಕ್ತರಾಗಿ, ತಮ್ಮ ಜೀವನ ಮಟ್ಟದ ಬಗ್ಗೆ ಗಾಢವಾಗಿ ಚಿಂತಿಸಲು ಸಮಯ ಉಳ್ಳವರಾಗಿದ್ದರು. ಇವರಲ್ಲಿ ಬಹಳಷ್ಟು ಮಂದಿ ಮಧ್ಯಮ ವರ್ಗಕ್ಕೆ ಸೇರಿದವರು. ಪರಿಪೂರ್ಣವಾದ ಒಂದು ಆದರ್ಶ ಸಮಾಜದ ಪರಿಕಲ್ಪನೆ ಇವರಿಗಿಲ್ಲದಿದ್ದರೂ, ಈ ದಿಕ್ಕಿನಲ್ಲಿ ಮುನ್ನುಗ್ಗುವ ಉತ್ಸುಕತೆ ಮತ್ತು ಸಾಹಸವನ್ನು ಹೊಂದಿದ್ದರು. ಇವರ ಮೊದಲ ಹೆಜ್ಜೆ ಪ್ರಪಂಚವನ್ನು ಬದಲಾಯಿಸುವುದಕ್ಕಿಂತ, ಅದರಲ್ಲಿದ್ದು ತಮ್ಮ ಧ್ಯೇಯ ಸಾಧಿಸಲು ತಮ್ಮನ್ನು ಹಾಗೂ ತಮ್ಮಲ್ಲಿ ಹುದುಗಿದ್ದ ಶಕ್ತಿ, ಪ್ರತಿಭೆಗಳನ್ನು ಸರ್ವೇಕ್ಷಣೆ ಮಾಡಿಕೊಳ್ಳುವುದಾಗಿತ್ತು.

ಇವರಲ್ಲಿ ಮುಖ್ಯರಾದವರು ಜರ್ಮೇನ್‌ಗ್ರೀರ್. ಈಕೆಯ ಮೇರು ಕೃತಿ-ಸ್ತ್ರೀ ಶಿಖಂಡಿ (The female Eunuch). ಈ ಕೃತಿಯಲ್ಲಿ ಈಕೆ ತನ್ನ ಚಿಂತನೆಗಳನ್ನೆಲ್ಲಾ ವಿವರವಾಗಿ ತರ್ಕಬದ್ಧವಾಗಿ ಮಂಡಿಸಿದ್ದಾರೆ. ಸ್ತ್ರೀ ಅಬಲೆ, ದೈಹಿಕ ರಚನೆ ಅವಳ ವಿಧಿ ಎಂಬುದನ್ನು ಜರ್ಮೇನ್ ಗ್ರೀರ್ ಆಳವಾಗಿ ಪ್ರಶ್ನಿಸುತ್ತಾರೆ. ಹೆಣ್ಣಾಗಲಿ, ಗಂಡಾಗಲಿ ಒಂದು ಲಿಂಗವನ್ನು ಪಡೆದು ಹುಟ್ಟುತ್ತಾರೆ. ಆದರೆ ಆ ಲಿಂಗಕ್ಕೆ ಸಮಾಜ, ಸಂಸ್ಕೃತಿ ಮತ್ತು ಸಂಪ್ರದಾಯ ಕೆಲವು ರೂಪರೇಷೆಗಳನ್ನು ಅಣಿಮಾಡಿ ಇಟ್ಟಿರುತ್ತವೆ. ಗಂಡು, ಹೆಣ್ಣು ಪರಸ್ಪರ ಎದುರಾಳಿಗಳು, ಪೂರ್ಣವಾಗಿ ಭಿನ್ನವಾದವರು ಎಂಬ ಭಾವನೆ ಹೀಗೆ ಬೇರೂಡೆಯುತ್ತದೆ. ಮನುಷ್ಯನಲ್ಲಿರುವ ಕ್ರೋಮೋಸೋಮುಗಳು (24 ಜೊತೆ) ದೈಹಿಕ ರಚನೆ, ಮನಸ್ಥಿತಿ ಮತ್ತಿತರ ವ್ಯಕ್ತಿತ್ವಕ್ಕನುಸಾರವಾದ ಗುಣಗಳನ್ನು ನಿರ್ಧರಿಸುತ್ತವೆ. ಜರ್ಮೇನ್‌ಗ್ರೀರ್‌ರ ಪ್ರಶ್ನೆ ಇದು-ಯಾವುದೇ ಹೆಣ್ಣು ಅಥವಾ ಗಂಡಿನಲ್ಲಿ 23 ಜೊತೆ ಕ್ರೋಮೋಸೋಮುಗಳು ಅನುರೂಪವಾಗಿರುತ್ತದೆ, 24ನೇ ಜೊತೆಯಲ್ಲಿ ಮಾತ್ರ ಗಂಡು XY ಮತ್ತು ಹೆಣ್ಣು XX ಜೋಡಿ ಪಡೆದಿರುತ್ತಾರೆ. ಹೀಗಾದ ಮೇಲೆ 48 ಕ್ರೋಮೋಸೋಮುಗಳಲ್ಲಿ 47ರ ಅನುರೂಪತೆಗಿಂತ 48ನೇ ಕ್ರೋಮೋಸೋಮಿನ ಭಿನ್ನತೆಗೇ ಏಕಿಷ್ಟು ಮನ್ನಣೆ ನೀಡಲಾಗುತ್ತಿದೆ? ಒಂದು ಕ್ರೋಮೋಸೋಮಿನ ಭಿನ್ನತೆಗೆ ಕೊಟ್ಟ ಅನಗತ್ಯ ಮಹತ್ವ ಹೆಣ್ಣು ಮತ್ತು ಗಂಡನ್ನು ಉತ್ತರ-ದಕ್ಷಿಣ ಧ್ರುವಗಳನ್ನಾಗಿ ಮಾಡಿ ಅವರೀರ್ವರ ಸಮಾನತೆಯನ್ನು ಅಲ್ಲಗಳೆಯುತ್ತದೆ.

ಬಾಲ್ಯದಲ್ಲಿ ಮಕ್ಕಳ ಬೆಳವಣಿಗೆಯನ್ನು ಕುಂಠಿತಗೊಳಿಸುವುದು, ಹೆಣ್ಣು-ಗಂಡಿನ ಬೇದಭಾವವನ್ನು ಹುಟ್ಟು ಹಾಕುವುದು, ಅಸಮಾನತೆಗೆ ಮತ್ತೊಂದು ಬಲವಾದ ಕಾರಣ. ಗ್ರೀರ್‌ರ ಅಭಿಪ್ರಾಯದಲ್ಲಿ ಪ್ರತಿಯೊಂದು ಮಗುವೂ ಚೈತನ್ಯದ ಪ್ರತಿರೂಪ : ಅದರ ಶಕ್ತಿಯನ್ನೂ, ಆಸೆಗಳನ್ನೂ, ಉತ್ಸಾಹವನ್ನೂ ಕಡೆಗಣಿಸಿ, ತಾಯಿ ತಂದೆಯರು ಅದನ್ನು ಒಂದು ಬೊಂಬೆಯಂತೆ ಅಥವಾ ಶಕ್ತಿಯ ಪ್ರವಾಹವನ್ನು ಬಿಡುಬೀಸಾಗಿ ಬಿಟ್ಟು ಬಿಡದೆ ಅದಕ್ಕೆ ಕಟ್ಟೆ ಕಟ್ಟುವುದು ಮಾನವ ಜನಾಂಗದ ಒಂದು ಮುಖ್ಯ ಗುಣ. ಹೀಗೆ ತಡೆಗಟ್ಟಿದ ಚೈತನ್ಯ ಒಂದು ಮಗುವಿನ ವಿಕೃತ ಬೆಳವಣಿಗೆಗೆ ಕಾರಣ ಎನ್ನುತ್ತಾರೆ ಗ್ರೀರ್. ಎಷ್ಟೋ ಪ್ರತಿಭಾಶಾಲಿ ಮಕ್ಕಳು ಕಟ್ಟುಕಟ್ಟಳೆಗೊಳಗಾಗುತ್ತಾರೆ. ಗಂಡು ಮಕ್ಕಳು ಈ ದಬ್ಬಾಳಿಕೆಯಿಂದ ಬೇಗ ಮುಕ್ತ

ರಾದರೂ ಅವರ ಶಕ್ತಿ, ಪ್ರತಿಭೆ ಸಮಾಜ ಅಪೇಕ್ಷಿಸು ವಂತೆ ಸ್ಪರ್ಧಾ ಮನೋಭಾವ, ಕಾಠಿಣ್ಯ, ಹೊಡೆದಾಟದ ಪ್ರವೃತ್ತಿಯಾಗಿ ಪರಿವರ್ತಿಸಲ್ಪಡುತ್ತಾರೆ. ಗಂಡೆಂದರೆ ಬಲಶಾಲಿ, ಸ್ಪರ್ಧಾಳು ಮತ್ತು ಕಠಿಣ ಎಂಬ ಪಡಿಯಚ್ಚು ರೂಪಿತವಾಗುತ್ತದೆ. ಇದೇ ರೀತಿ ಹೆಣ್ಣು ಮಕ್ಕಳು ತಾಯಿ ತಂದೆಯ ಉಸ್ತುವಾರಿಯಲ್ಲಿ ಅಪೇಕ್ಷಿತ ಹೆಣ್ಣು ಪಡಿ ಯಚ್ಚಿನಲ್ಲಿ ಎರಕ ಹುಯ್ಯಲ್ಪಡುತ್ತಾರೆ. ಅವಳ ಕ್ರಿಯಾ ಶೀಲತೆ, ನಿಷ್ಕ್ರಿಯಗೊಳಿಸಲ್ಪಡುತ್ತದೆ, ಅವಳ ದೈಹಿಕ ರಚನೆ ಬರೀ ಜೈವಿಕವಾಗಿ ಉಳಿಯುದೆ ಅವಳ ಹಣೆಬರಹ ವಾಗುತ್ತದೆ. ತನ್ನ ಹೆಣ್ತನವನ್ನು ಅದುಮಿಡಲು ಅವಳಿಗೆ ತರಬೇತಿ ಕೊಡಲಾಗುತ್ತದೆ. ತನ್ನ ಸ್ತ್ರೀ ಶಕ್ತಿಯನ್ನು ಅಲ್ಲ ಗೆಳೆಯಲು ಅವಳಿಗೆ ಸತತವಾಗಿ ಶಿಕ್ಷಣ ನೀಡಲಾಗುತ್ತದೆ. ಇದನ್ನೇ ಗ್ರೀರ್ ಸ್ತ್ರೀ-ಶಿಖಂಡಿ ಅಥವಾ ಹೆಣ್ಣು ಪಡಿ ಯಚ್ಚು (Female Stereotype) ಎನ್ನುವುದು. ಇದಕ್ಕೆ ಮುಖ್ಯ ಕಾರಣ-ಮನಶ್ಶಾಸ್ತ್ರದ ಕೆಲವು ಮಿಥ್ಯೆಗಳು, ಮನ ಶ್ಶಾಸ್ತ್ರದ ಜನಕ-ಸಿಗ್ಮಂಡ್ ಫ್ರಾಯ್ಡ್, ಆದರೆ ಅದಕ್ಕೆ ಜನನಿ ಇಲ್ಲ. ಗ್ರೀರ್‌ರವರು ವಾದಿಸುವಂತೆ-ಫ್ರಾಯ್ಡ್ ಹೆಣ್ತನವನ್ನು ಸರಿಯಾಗಿ ವಿಶ್ಲೇಷಿಸಿಲ್ಲ. ಆತನ ಅಭಿಪ್ರಾಯ ದಲ್ಲಿ ಹೆಣ್ಣು, ಜನನೇಂದ್ರಿಯ ರಹಿತನಾದ ಗಂಡು. ಆತನ ವಿಶ್ಲೇಷಣೆಯಂತೆ ಹೆಣ್ಣು ಒಬ್ಬ ವ್ಯಕ್ತಿಯೇ ಅಲ್ಲ, ಅವಳು ಗಂಡಸಲ್ಲದವಳು ಅಥವಾ ಜನನೇಂದ್ರಿಯವಿಲ್ಲದ ಗಂಡಸಿ ಗಿಂತ ಕೀಳಾದ ಮನುಷ್ಯ ಜಾತಿಯವಳು. "ಎಲ್ಲಿಯವರೆಗೆ ಹೆಣ್ಣು ತನ್ನ ಹೆಣ್ತನವನ್ನು ಗುರುತಿಸಿಕೊಳ್ಳಲಾರಳೋ ಅಲ್ಲಿಯವರೆಗೆ ಅವಳು ಅಪೂರ್ಣ ವ್ಯಕ್ತಿ"-ಎನ್ನುತ್ತಾರೆ ಗ್ರೀರ್. ದೈಹಿಕವಾಗಿ,ಮಾನಸಿಕವಾಗಿ ಹೆಣ್ಣಿಗೆ ಅವಲಂಬನೆ ಮತ್ತು ದುರ್ಬಲತೆಯ ಬಣ್ಣ ಬಳಿಯಲಾಗಿದೆ. ಅವಳು ಅದನ್ನು ಉಳಿದ ಪಿತೃಪ್ರಧಾನ ಮೌಲ್ಯಗಳ ಜೊತೆ ಕಿತ್ತು ಬಿಸಾಡಬೇಕು. ತನ್ನ ಶಕ್ತಿ, ಹೆಣ್ತನದ ಅರಿವನ್ನು ಬೆಳೆಸಿ ಅದರ ಪರಿಧಿಯಲ್ಲೇ ತನ್ನ ಮೌಲ್ಯಮಾಪನ ಮಾಡಿಕೊಳ್ಳ ಬೇಕು. ಸಮಾಜದ ಪಿತೃಪ್ರಧಾನ ಮೌಲ್ಯಗಳ ಅಳತೆ ಗೋಲು ಅವಳಿಗೆ ಬೇಡ.

ಸಮಾಜದ ಕೆಲವು ಅಂಶಗಳು ಹೆಣ್ಣನ್ನು ಶಿಖಂಡಿಯ ನ್ನಾಗಿ ಪರಿವರ್ತಿಸಲು ಸಂಚು ನಡೆಸುತ್ತವೆ. ಗ್ರೀರ್‌ರವರ ಹೇಳಿಕೆಯಂತೆ ಇವು ಪ್ರೇಮ, ಪ್ರಣಯ ವಿವಾಹ ಮತ್ತು ಸುರಕ್ಷತೆ. ಪರಸ್ಪರ ಗೌರವವಿಲ್ಲದ ಯಾವುದೇ ಹೆಣ್ಣು ಗಂಡಿನ ಜೋಡಿ ತಾವು ಪರಸ್ಪರ ಪ್ರೀತಿಸುತ್ತಿದ್ದೇವೆ ಎಂದರೆ ಅದೊಂದು ಮರೀಚಿಕೆ. ಸಮಾನರಲ್ಲಿ ಮಾತ್ರ ಪ್ರೇಮ ಸಾಧ್ಯ, ಹೀಗಿರುವಾಗ ತನಗಿಂತ ಹೆಣ್ಣು ಕೀಳು ಎನ್ನುವ ಗಂಡು ಅವಳನ್ನು ಹೇಗೆ ಪ್ರೀತಿಸಬಲ್ಲ ? ಸಮಾಜ ದಲ್ಲಿ ಈಗ ಪ್ರೇಮ ವಿಕೃತಗೊಂಡು ಮೂರು ವಿಧವಾದ ವಿರೂಪಗಳಲ್ಲಿ ಕಾಣಬರುತ್ತದೆ. ಮೊದಲನೆಯದು

ಹುತಾತ್ಮ ಮನೋಭಾವ. ಇದರಲ್ಲಿ ತನ್ನತನವನ್ನೇ ಬಲಿ ಕೊಡುವುದಕ್ಕೆ ಪ್ರೇಮ ಎಂದು ಹೆಸರಿಸಲಾಗುತ್ತದೆ. ಎಷ್ಟೋ ಜನ ಹೆಂಗಸರು ತಮ್ಮ ಸಂಬಂಧಗಳಲ್ಲಿ ಇದನ್ನು ಬೆಳೆಸಿಕೊಳ್ಳುತ್ತಾರೆ, ಅದಕ್ಕೆ ಪ್ರೇಮವೆನ್ನುತ್ತಾರೆ. ಇದಕ್ಕೆ ಸರಿಯಾದ ಉದಾಹರಣೆ, ನಮ್ಮ ಭಾರತೀಯ ಸಮಾಜದ ಸತೀಸಾವಿತ್ರಿ, ಸೀತೆಯರ ಪಡಿಯಚ್ಚುಗಳು, ತನ್ನತನವನ್ನು ಅಲ್ಲಗೆಳೆದು, ಸ್ವಂತಿಕೆಯನ್ನು ತ್ಯಜಿಸಿ, ಪರರಿಗಾಗಿ ಜೀವಿಸುವುದೇ ಪ್ರೇಮ ಎಂದುಕೊಂಡಿರುವ ಅನೇಕ ಮಹಿಳೆಯರು ನಾನು ಬದುಕಿರುವುದು ನನ್ನ ಗಂಡ, ಮಕ್ಕಳಿಗಾಗಿ, ಅವರ ಸಂತೋಷವೇ ನನ್ನ ಸಂತೋಷ, ಅವರ ವ್ಯಕ್ತಿತ್ವ, ಅವರ ಆಕಾಂಕ್ಷೆಗಳೇ ನನ್ನವು-ಇದರ ಹೆಸರೇ ಪ್ರೇಮ ಎಂಬ ಭ್ರಮೆಯಲ್ಲಿ ಜೀವಿ ಸಿರುವ ಸ್ತ್ರೀಯರು।

ಗಂಡಸರು ಪ್ರೇಮ ಎಂದು ಕರೆಯುವ ಭಾವನೆ ಅಹಂಭಾವದ ಮತ್ತೊಂದು ಹೆಸರು. ತನ್ನ ಮನೆ, ಕಾರು ಆಸ್ತಿಯಂತೆ ಹೆಂಡತಿಯೂ ಅವರ ಅಹಂನ ಬಡಾವಣೆ. ತನ್ನ ಪ್ರೇಯಸಿ ತನ್ನೊಡನಿರಬೇಕು, ಏಕೆಂದರೆ ಅವಳು ನನ್ನವಳು, ಅವಳ ಇಷ್ಟಾನಿಷ್ಟಗಳು ಲೆಕ್ಕಕ್ಕಿಲ್ಲ ಎನ್ನುವ ಗಂಡಸು ಈ ವಿಕೃತ ಭಾವನೆಯನ್ನೇ ಪ್ರೇಮ ಎನ್ನುತ್ತಾನೆ. ಈ ಪ್ರೇಮದ ನಿಜವಾದ ಪರೀಕ್ಷೆ, ಪ್ರೇಯಸಿ ಅವನನ್ನು ತಿರಸ್ಕರಿಸಿದಾಗ ನಡೆಯುತ್ತದೆ. ಪ್ರೇಮದ ಪ್ರತೀಕವಾಗಿದ್ದ ಅದೇ ಪ್ರೆಯಸಿ, ಅವನ ಕೋಪ, ತಿರಸ್ಕಾರ ಮತ್ತು ಸೇಡಿನ ಪ್ರತೀಕವಾಗಿಬಿಡುತ್ತಾಳೆ.

ಇವೆರಡೂ ಅಲ್ಲದ ಮತ್ತೊಂದು ವಿಕೃತ ರೂಪ ಹುಚ್ಚು, ಇದನ್ನು ಪ್ರೇಮ ಎಂದು ಭ್ರಮಿಸುತ್ತಾರೆ. ಪ್ರೇಮಿಗಳು, ಪ್ರೇಮದ ಪರಿಭಾಷೆ–ಒಬ್ಬರ ಬಗ್ಗೆ ಹುಚ್ಚು ಹಿಡಿಸಿಕೊಳ್ಳುವುದು, ಅಥವಾ ಒಬ್ಬರ ಪ್ರೀತಿಯಲ್ಲಿ ಹುಚ್ಚಾಗುವುದು ಎಂದು. ಇಲ್ಲಿಯವರೆಗೆ ಯಾರೂ ಜವಾಬ್ದಾರಿಯುತವಾಗಿ ಅಥವಾ ತರ್ಕಬದ್ಧವಾಗಿ ಪ್ರೇಮ ಮಾಡಿಲ್ಲ, ಹುಚ್ಚಾಗಿ ಅಥವಾ ತಡೆರಹಿತವಾಗಿ ಪ್ರೀತಿ ಮಾಡಿದ್ದಾರೆ. ಅಂದಮೇಲೆ ಈ ಭಾವನೆ ಅತಿರೇಕದ್ದು, ಭಾವೋನ್ಮತ್ತತೆಯದು, ಇದು ಪ್ರೇಮವಲ್ಲ. ವಿವಾಹ ದಿಂದ ಸುರಕ್ಷತೆ ಸಿಗುತ್ತದೆ ಎಂಬುದನ್ನು ಜರ್ಮೇನ್

ಗ್ರೀರ್ ನಂಬುವುದಿಲ್ಲ. ಮೂರು ಮಕ್ಕಳಿರುವ ಗಂಡನಿಂದ ಪರಿತ್ಯಕ್ತಳಾದ ಹೆಂಡತಿಗಿಂತ, ಮಕ್ಕಳಿಲ್ಲದ ಅವಿವಾಹಿತೆ ಹೆಚ್ಚು ಸುರಕ್ಷಿತಳು ಎಂಬುದು ಗ್ರೀರ್‌ರ ವಾದ. ವಿವಾಹ-ವಿಚ್ಛೇದನ ನಿಯಮಗಳು ಸರಳವಾದಷ್ಟೂ ಹೆಂಡತಿಯೂ ಅಸುರಕ್ಷಿತಳಾಗುತ್ತಾಳೆ ಎನ್ನುತ್ತಾರೆ ಜರ್ಮೇನ್ ಗ್ರೀರ್.

ಸಾಹಿತ್ಯದಲ್ಲಿ ಇಲ್ಲಿಯವರೆಗೆ ಹೆಣ್ಣು ಗಂಡಿನ ಪ್ರೇಮ-ಪ್ರೀತಿಯ ವಿವಿಧ ಮುಖಗಳನ್ನು ಲೇಖಕರು ಚರ್ಚಿಸಿದ್ದಾರೆ, ಚಿತ್ರಿಸಿದ್ದಾರೆ ಮತ್ತು ವಿಶ್ಲೇಷಿಸಿದ್ದಾರೆ. ಆದರೆ ಯಾರೂ ಆ ನಾಣ್ಯದ ಇನ್ನೊಂದು ಮುಖವಾದ-ದ್ವೇಷವನ್ನು ಪರಿಗಣಿಸಿಲ್ಲ. ಗ್ರೀರ್‌ರ ಪ್ರಕಾರ ನಾಣ್ಯದ ಎರಡೂ ಮುಖಗಳು ಈ ಸಂಬಂಧವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಬೇಕೇ ಬೇಕು. ಹೆಂಗಸರನ್ನು ಬೈಯಲು ಉಪಯೋಗಿಸುವ ಬೈಗಳು, ಅತ್ಯಾಚಾರಗಳು, ಕಡೆಗೆ ಪ್ರೀತಿಸಲು ಉಪಯೋಗಿಸುವ ಶಬ್ದಗಳು ಕೂಡ ಗಂಡಸರಿಗೆ ಅವರ ಬಗ್ಗೆ ಇರುವ ದ್ವೇಷವನ್ನು ಪ್ರತಿಬಿಂಬಿಸುತ್ತವೆ. ಹೆಣ್ಣು ಗಂಡಿನ ಸಂಬಂಧದ ಸಮತೋಲನವನ್ನು ಪಡೆಯಬೇಕಾದರೆ ಹೆಣ್ಣು, ಸಮಾಜ ನೀಡಿದ ಪಡಿಯಚ್ಚನ್ನು ಒಡೆದು, ತನ್ನತನವನ್ನು ಕಂಡುಕೊಳ್ಳಬೇಕು. ಇದಕ್ಕೆ ಬೇಕಾದ್ದು, ಸುಧಾರಣೆಯಲ್ಲ–ಕ್ರಾಂತಿ,ಕ್ರಾಂತಿ ಬರೇ ಪ್ರಕ್ರಿಯೆಯಲ್ಲ ಅಥವಾ ದಂಗೆಯೂ ಅಲ್ಲ. ಇದು ಸ್ತ್ರೀ ನಡವಳಿಕೆಯಲ್ಲಿ ಹಲವು ಬದಲಾವಣೆಗಳನ್ನು ತರಬೇಕು. ಗ್ರೀರ್‌ರ ಮಾತುಗಳಲ್ಲಿ ಹೇಳಬೇಕೆಂದರೆ—

ಹೋರಾಟದಲ್ಲಿ ಸಂತೋಷಿಸುವ ಶಕ್ತಿ ಪಡೆಯಬೇಕು. ಈ ಹೋರಾಟದಿಂದ ಬೇರೇನೂ ಬಹುಮಾನ ಸಿಗುದಿದ್ದರೂ, ಆತ್ಮಾಭಿಮಾನ ಹಾಗೂ ಆತ್ಮಗೌರವ ಸಿಗುತ್ತವೆ ಅದನ್ನು ಪಡೆದು ಸುಖಿಸಬೇಕು.

ಅಸಹಾಯಕತೆ ಮತ್ತು ಬೇಡಿಕೆಗಳಿಂದ ಮುಕ್ತರಾಗಿ ಭೂಮಿಯ ಮೇಲೆ ಸ್ವಚ್ಛಂದವಾಗಿ ನಡೆಯಬೇಕು, ಅದು ಸ್ತ್ರೀಯರ ಜನ್ಮಸಿದ್ಧ ಹಕ್ಕು.

ಸ್ತ್ರೀಯರು ತಮ್ಮ ದೇಹದ ಮೇಲಿನ ಹತೋಟಿಯನ್ನು ತಾವೇ ಪಡೆಯಬೇಕು. ಅದರ ಶಕ್ತಿಯನ್ನು ಗುರ್ತಿಸಬೇಕು ಮತ್ತು ಅದರ ನೈಸರ್ಗಿಕ ಸೌಂದರ್ಯವನ್ನು ಒಪ್ಪಿಕೊಳ್ಳಬೇಕು.

ಸಮಾಜ ಸೃಷ್ಟಿಸಿರುವ ಹೆಣ್ಣು-ಪಡಿಯಚ್ಚಿನ ಕೋಟೆಯನ್ನು ಒಡೆದು ಸ್ತ್ರೀ ತನ್ನ ಹೆಣ್ತನವನ್ನು ಅಳೆದು ಒಪ್ಪಿಕೊಳ್ಳಬೇಕು. ಸಮಾಜ ಹೇರಿರುವ ಪಾತ್ರವನ್ನು ನಟಿಸುವುದನ್ನು ನಿಲ್ಲಿಸಬೇಕು. ಇದು ಜರ್ಮೇನ್ ಗ್ರೀರ್‌ರ ಕೋರಿಕೆ. ಆಕೆ ತನ್ನ ಸ್ತ್ರೀ ಓದುಗರಿಗೆ ಯಾವುದೇ ವಿಧವಾದ ಸಲಹೆ ನಿಯಮ, ಕಟ್ಟುಗಳನ್ನು ನೀಡುವುದಿಲ್ಲ. ತನ್ನನ್ನರಿತ ಸ್ತ್ರೀ ತನ್ನಿಷ್ಟ ಪ್ರಕಾರವಾದ ಧೀಮಂತಿಕೆಯ, ಗೌರವಯುತವಾದ ದಾರಿಯನ್ನು ತಾನೇ ಆಯ್ದುಕೊಳ್ಳಬೇಕು. ಇದು ಗ್ರೀರ್‌ರ ಆಸೆ.

ಸ್ತ್ರೀಗೆ ಸಂಪೂರ್ಣವಾದ ಸ್ವಾತಂತ್ರ್ಯ, ಜೀವನ ನಡೆಸಲು ಬೇಕಾದ ದಾರಿಯನ್ನು ಆಯ್ದುಕೊಳ್ಳುವ ಹಕ್ಕು ಬೇಕೇ ಬೇಕು ಎನ್ನುವ ಜರ್ಮೇನ್ ಗ್ರೀರ್, ಸ್ತ್ರೀವಾದದ ಹೊಸ ಮುಖವೊಂದನ್ನು ಓದುಗರಿಗೆ ನೀಡುತ್ತಾರೆ.

●

## ಶೋಷಣೆಯ ಕಥೆ

ಹುತ್ತದ ಹೊಲಬ ಕಂಡೆ
ಬಿತ್ತದ ಬೆಳೆಯ ಕಂಡೆ

ಜಗದ ಬಗೆಯ ನೋಡಿ
ಆಸೆ ಚೂರಾಗೈತೆ–ಹೆಣ್ಣ
ಮನಸು ನೊಂದು ಹೋಗೈತೆ
ಅವಳ ಕನಸು ಕೆಂಪಾಗೈತೆ !

ಆಡಿ ನಲಿವ ಎಳೆಯ ಹೆಣ್ಣ ತಂದು
ಮದುವೆ ಮಾಡಲ್ಯಾಕೋ ?

ಚಿನ್ನ ಬೆಳ್ಳಿ ಹೊತ್ತು ತಂದ ನಾರಿ
ಕೊನೆಗೆ ಬಲಿಯಾದಲ್ಯಾಕೋ....!

ಹೆರುವ ಹೆಣ್ಣಾದಳೋ.... ಮತ್ತೆ ಮತ್ತೆ
ಹಡೆದು ಹಣ್ಣಾದಳೋ....!

ದೇವರಿಗೆಂದು ಹೆಣ್ಣು ಬಸವಿಬಿಟ್ಟು
ದಾಸಿ ಮಾಡಲ್ಯಾಕೋ ?

ಜಾರೆ ಮಾಡಿ ಸಂತೆಗೆ ಹೊತ್ತು ತಂದು
ಮೈಯ ಮಾರಲ್ಯಾಕೋ ?

ಅಬಲೆ ಹೆಣ್ಣಾಗದೆ–ಮೆಟ್ಟಿ ನಿಂತು
ಗಂಡಿನ ಸಮನಾಗಬೇಕೋ !

# ಮಹಿಳೆ ಮತ್ತು ಪ್ರವಾಸ

ಉಷಾ ರಾಣಿ

ಪ್ರವಾಸ! ಮಹಿಳೆಯರಿಗೇಕೆ? ಪುರುಷರಿಗೂ ಸಿಲುಕದ ಮಾತು. ಆದರೂ ಆಸ್ತಿಕರು ಒಬ್ಬರೇ ಅಥವಾ ಗುಂಪಿನಲ್ಲಿ ಹೋಗಿ ಬರುವರು. ಹಾಗಾಗಿಯೇ ತಮ್ಮ ಮನೆಯಾಕೆಗೆ ಯಾರಾದರೂ ಬೆದರಿಕೆ ಹಾಕಿದಲ್ಲಿ "ಪ್ರಪಂಚ ನೋಡಿರುವವರತ್ರ ಮಾತನಾಡಲಿಕ್ಕೆ ಹೇಳು" ಎಂದು ಪುರುಷರು ಹೇಳುವುದನ್ನು ಕೇಳಿದ್ದೀರಲ್ಲ! ಈ ಪ್ರಪಂಚ ಜ್ಞಾನಗಳಿಸಲು ಮಹಿಳೆ ಶ್ರಮಿಸುತ್ತಿದ್ದಾಳೆಯೆ?

ಸಾಮಾನ್ಯವಾಗಿ ಮನೆಯಲ್ಲೇ ಇರುವ ಮಹಿಳೆಯರಲ್ಲಿ ಅನಾರೋಗ್ಯ ಹೆಚ್ಚಾಗಿ ಕಾಣಸಿಕೊಳ್ಳುತ್ತದೆ. ಮನಸ್ಸನ್ನು ಉಲ್ಲಸಿತವನ್ನಾಗಿಟ್ಟುಕೊಂಡಲ್ಲಿ ಆರೋಗ್ಯವಾಗಿರಲು ಸಾಧ್ಯ. ಇದಕ್ಕೆ ತಕ್ಕ ಪರಿಸರವೂ ಅಗತ್ಯವಿದೆ. ವೈದ್ಯರು 'ಪರಿಸರ ಬದಲಾವಣೆ' ಸೂಚಿಸುವುದು ಈ ಹಿನ್ನೆಲೆಯಲ್ಲೇ. ಮಕ್ಕಳು ಶಾಲಾ ಕಾಲೇಜುಗಳಿಗೆ ರಜೆ ಬರುತ್ತಿದ್ದಂತೆ ಬದಲಾವಣೆ ಬಯಸುತ್ತಾರೆ ಹಾಗಾಗಿ ನಮ್ಮ ದೇಶದಲ್ಲಿ ನೆಂಟರಿಷ್ಟರ ಮನೆಗೆ ಹೋಗಿ ಬರುವುದೇ ರೂಢಿಯಲ್ಲಿರುವ 'ಪರಿಸರ ಬದಲಾವಣೆ'.

ಮನೆಯ ಯಜಮಾನನಿಗೆ ಪ್ರವಾಸದಲ್ಲಿ ಅಭಿರುಚಿಯಿದ್ದಲ್ಲಿ ಮಾತ್ರ ಮನೆಮಂದಿಗೆಲ್ಲಾ ಸುತ್ತಾಡಲು ಸಾಧ್ಯ. ನಮಗೆ ತಿಳಿದಿರುವಂತೆ ಬ್ಯಾಂಕ್ ಉದ್ಯೋಗಿಗಳಿಗಿರುವ ಸೌಲಭ್ಯಗಳು ಹೆಚ್ಚು. ಬ್ಯಾಂಕ್ ಆಫೀಸರ್ ಉಪಾಧ್ಯಾಯ ಅವರನ್ನು ವಿಚಾರಿಸಿದಾಗ, "ಪ್ರವಾಸದಲ್ಲಿ ವಿಶೇಷ ಆಸಕ್ತಿ ಇಲ್ಲ, ಚಿಕ್ಕಂದಿನಿಂದಲೂ ಕಷ್ಟದಲ್ಲೇ ಬೆಳೆದವರು. ಈಗ ಆರ್ಥಿಕ ಪರಿಸ್ಥಿತಿ ಚೆನ್ನಾಗಿದೆ. ಆದರೆ ಸಿಗುವ ಪ್ರಯಾಣ ಭತ್ಯೆಯ ಮೇಲೆ ಖರ್ಚಿಗೆ ಹಣ ಇಟ್ಟು ಕೊಳ್ಳಬೇಕಲ್ಲ!" ಎಂದು ಉದ್ಗರಿಸಿದರು. ಮತ್ತೊಬ್ಬ ಬ್ಯಾಂಕ್ ಮ್ಯಾನೇಜರ್ ಕೃಷ್ಣಭಟ್‌ರದ್ದು ಅದೇ ನಿಲುವು. 'ಮನಸಿದ್ದರೆ ಮಾರ್ಗ' ಎಂಬಂತೆ ಆಸಕ್ತಿ ಇದ್ದಲ್ಲಿ ಮೇಲೆ ಖರ್ಚಿಗೆ ಉಳಿಸಿಕೊಳ್ಳುವುದು ಕಷ್ಟವೇನಲ್ಲ. ಹೆಚ್ಚಿನವರು ಆಸಕ್ತಿಯ ಕೊರತೆಯಿಂದಾಗಿ ಇರುವ ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಳ್ಳುತ್ತಿಲ್ಲ. ಇದರಿಂದ ಇಡೀ ಕುಟುಂಬ ಪ್ರವಾಸದಿಂದ ವಂಚಿತರು.

ಇನ್ನು ಉದ್ಯೋಗಸ್ಥ ಮಹಿಳೆಯರಲ್ಲಿ ಎಷ್ಟೋ ಮಂದಿಗೆ ಸೌಲಭ್ಯಗಳು ಕಡಿಮೆ. ಉಳ್ಳವರು ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಾಗುತ್ತಿಲ್ಲ. ಕಾರಣ ಮನೆಯವರ ಸಹಕಾರವಿಲ್ಲದಿರುವುದು. ಮನೆ, ಉದ್ಯೋಗಕ್ಕೂ ಮಿಗಿಲಾದದ್ದಿದೆ ಎಂಬುದರ ಅರಿವಿದ್ದರೂ ಅದನ್ನು ಕಾರ್ಯರೂಪಕ್ಕೆ ತರಲು ಅಡಚಣೆಗಳು ನೂರಾರು. ಹೀಗಾಗಿ ಕೈ ತುಂಬ ಸಂಪಾದಿಸುತ್ತಿದ್ದರೂ ಜನರಲ್ಲಿ ನೆಮ್ಮದಿಯಿಲ್ಲದಂತಾಗಿದೆ. ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯನ್ನು ಅವಲೋಕಿಸಿದಾಗ 40 ಕೋಟಿ ಜನ ಬಡತನದ ರೇಖೆಯಲ್ಲಿದ್ದಾರೆಂದು ತಿಳಿದುಬಂದಿದೆ. ಒಂದು ಹೊತ್ತು ಕೂಳಿಗೆ ಕಷ್ಟಪಡುವ ಜನರಿಗೆ ನೋಟಕ್ಕೆ ಅವಕಾಶವಿದೆಯೆ? ಅದು ಸರಿ, ಆದರೆ ಅವರಲ್ಲಿರುವ ಸಂತೃಪ್ತಿ ಸಮಾಧಾನ ಹೊಟ್ಟೆತುಂಬಿದವರಲ್ಲಿದೆಯೆ?

ಮಹಿಳೆಯರು ವಿಚಾರ ಸಂಕಿರಣ, ಕಾರ್ಯಾಗಾರ ಇತ್ಯಾದಿಗಳಲ್ಲಿ ಭಾಗವಹಿಸಲಿಕ್ಕೆಂದು ಊರಿಂದ ಊರಿಗೆ ಹೋಗುತ್ತಿರುವುದನ್ನು ಈ ದಿನಗಳಲ್ಲಿ ನೋಡುವುದು ಅಪರೂಪವೇನಲ್ಲ. ಇಂತಹವರ ಸಂಖ್ಯೆಯು ಕಡಿಮೆ. ಕಾರಣ ಊರಿನೊಳಗೆ ಓಡಾಡಲು ಅನುಮತಿ ಇದೆಯೇ ವಿನಃ ಊರು ದಾಟಿ ಹೋಗಬೇಕಾದರೆ ಜೊತೆಗಿಲ್ಲದೆ ಕಳುಹಿಸುವುದಾದರೂ ಹೇಗೆ? ಎಂಬ ಧೋರಣೆ, ಅಲ್ಲದೆ ಹೋಗಿ ಮಾಡುವುದಾದರೂ ಏನು ಎಂಬುದು ಮತ್ತೊಂದು ವಾದ. ಇದರಿಂದ ಮಹಿಳೆಯ ಸರ್ವತೋಮುಖ ಬೆಳವಣಿಗೆ ಸಾಧ್ಯವಾಗುತ್ತಿಲ್ಲ. ಇತ್ತೀಚೆಗೆ ಗ್ರಾಮಾಂತರ ಪ್ರದೇಶದಲ್ಲಿ ರಾಷ್ಟ್ರೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಏರ್ಪಡಿಸಿದ್ದ 'ವಿಚಾರಸಂಕಿರಣ'ದಲ್ಲಿ ಭಾಗವಹಿಸಲು ಹೋಗಿದ್ದೆ. ಅಲ್ಲಿ ನನ್ನ ಸಹೋದ್ಯೋಗಿ ಮತ್ತು ನನ್ನನ್ನು (ಇಬ್ಬರನ್ನು) ಬಿಟ್ಟರೆ ಮಹಿಳಾ (ಅಧ್ಯಾಪಕರ) ಪ್ರತಿನಿಧಿಗಳಿರಲಿಲ್ಲ. ವಿದ್ಯಾವಂತರಲ್ಲೇ ಇಷ್ಟೊಂದು ಉದಾಸೀನವೇಕೆ?

'ಕೂಪ ಮಂಡೂಕ' ಪ್ರವೃತ್ತಿಯನ್ನು ಬದಿಗೊತ್ತಿ 'ದೇಶನೋಡು ಕೋಶ ಓದು' ಎಂಬ ಗಾದೆಯ ಸವಾಲನ್ನು ಎದುರಿಸಲು ಸಿದ್ಧವಾಗಿರುವ ಮಹಿಳೆಯರು ಇಲ್ಲವೆಂದಲ್ಲ. ದೇಶದ ಮೂಲೆಯನ್ನು ಸಂದರ್ಶಿಸಲು ತಮ್ಮದೇ ಆದ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಆದರಲ್ಲಿ ಹೆಚ್ಚಿನವರು ಆದ್ಯತೆ ನೀಡುವುದು ವ್ಯವಸ್ಥಿತ ಪ್ರವಾಸಕ್ಕೆ. ಭಾಷೆ ತಿಳಿಯದಿರುವುದೇ ಇದಕ್ಕೆ ಮೂಲ ಕಾರಣ. ಅಲ್ಪ

ಸ್ವಲ್ಪ ಗೊತ್ತಿದ್ದವರು ಸುರಕ್ಷಿತತೆಯ ದೃಷ್ಟಿಯಿಂದ ಗುಂಪಿನಲ್ಲಿ ಹೋಗುವುದನ್ನು ಅಪೇಕ್ಷಿಸುತ್ತಾರೆ. ಆದರೆ ನಮ್ಮಿಷ್ಟಕ್ಕೆ ನಾವೇ ಸ್ವತಂತ್ರವಾಗಿ ಹೋದಲ್ಲಿ ಸಿಗುವ ಅನುಭವಗಳು ಭಿನ್ನವಾಗಿರುತ್ತದೆ. ಎಷ್ಟೋ ಮಂದಿ ಕಾಲ್‌ನಡಿಗೆಯಲ್ಲಿ, ಸೈಕಲ್‌ನಲ್ಲಿ ಸಾಹಸಯಾತ್ರೆ ಮಾಡಿದ್ದನ್ನು ಅವರ ಅನುಭವಗಳನ್ನು ಕೇಳಿದ್ದೇವಲ್ಲಾ! ಇದು ನಿಜಕ್ಕೂ ಜ್ಞಾನಾರ್ಜನೆಗೆ ಅವಕಾಶ ನೀಡುತ್ತದೆ. ಇಲ್ಲಿ ನಮ್ಮ ಅನುಭವವನ್ನು ಓದುಗರಿಗೆ ತಿಳಿಸುವುದು ಸೂಕ್ತ.

ಮೊದ ಮೊದಲು ನಾವು ಗುಂಪಿನಲ್ಲೇ ಪ್ರವಾಸ ಮಾಡಿದ್ದೆವು. ಆದರೆ ಐದು ವರ್ಷಗಳ ಹಿಂದೆ ಪೂರ್ವ ರಾಜ್ಯಗಳತ್ತ ಹೊರಟಾಗ ನಮ್ಮ ಹಿತೈಷಿಗಳ ಸಲಹೆಯಂತೆ ಒರಿಸ್ಸಾವನ್ನು ಸಂದರ್ಶಿಸಿಯೇ ಬಿಹಾರ ಬಂಗಾಳದತ್ತ ಪ್ರಯಾಣ ಬೆಳಸಿದ್ದೆವು. ಭುವನೇಶ್ವರದಲ್ಲಿ ಮುಂಜಾನೆ 5.30ಕ್ಕೆ ರೈಲಿನಿಂದಿಳಿಧಾಗ, ಅದು ಅಪರಿಚಿತ ಸ್ಥಳವಾದರೂ ಹಾಗೆನಿಸಲಿಲ್ಲ. ಪುರಿ ಬಸ್‌ಸ್ಟಾಂಡ್‌ನಲ್ಲಿ ಮಾತ್ರ ಸೈಕಲ್ ರಿಕ್ಷಾದ ಚಾಲಕನೊಬ್ಬ ನಮ್ಮೊಡನೆ (ನಾವು ಮೂವರು ಸಹೋದರಿಯರಿದ್ದಾಗ್ಯೂ) ಬಾಬುಗಳು ಬಂದಿಲ್ಲವೇ? ಎಂದು ಕೇಳಿದ್ದನಷ್ಟೆ. ಆದರೆ ಎಲ್ಲಾ ಚಾಲಕರು ಒಂದೇ ದೃಷ್ಟಿಕೋನದವರಲ್ಲ. ಪುರಿಯಲ್ಲಿ ಸುತ್ತಾಡಲು, ತಂಗಲು ಯಾವುದೇ ತೊಂದರೆಯಾಗಲಿಲ್ಲ. ಮಹಿಳೆಯರನ್ನು ನೋಡುವ ದೃಷ್ಟಿಕೋನ ಬದಲಾಗುತ್ತಿದೆ ಯೆಂಬುದಕ್ಕೆ ಈ ನಿದರ್ಶನವೇ ಸಾಲದೇ ?

ಕಳೆದ ವರ್ಷ ಉದಯಪುರ (ರಾಜಸ್ಥಾನ)ದಲ್ಲಿ ಮೊದಲ ಬಾರಿಗೆ ಬಸ್ಸಿನಿಂದಿಳಿದಾಗ ಬೆಳಗಿನ ಜಾವ 3.45ರ ವೇಳೆಯಾಗಿತ್ತು. ಕತ್ತಲು, ಊರಿನ ಪರಿಚಯವೇ ಇರಲಿಲ್ಲ. ಆಗ ನಮ್ಮ ನೆರವಿಗೆ ಬಂದವರು ಒಬ್ಬ ಯುವಕ. ಸರಿಯಾದ ಮಾರ್ಗದರ್ಶನ ನೀಡಿ ಸುರಕ್ಷಿತ ಸ್ಥಳ ತಲುಪಿಸಿದ್ದ. ಉದಯಪುರದಿಂದ ಹಳದಿಘಾಟ್ (ರಾಣಾಪ್ರತಾಪಸಿಂಹ ಮತ್ತು ಅಕ್ಬರನಿಗೆ ಹೋರಾಟ ನಡೆದ ಸ್ಥಳ)ಗೆ 55 ಕಿ. ಮೀ. ಈ ದೂರವನ್ನು ನಾವಿಬ್ಬರು ಸಹೋದರಿ (ಅನ್ನಪೂರ್ಣ ಮತ್ತು ನಾನು) ಆಟೋದಲ್ಲೇ ಕ್ರಮಿಸಿದ್ದೆವೆಂದರೆ ಅಚ್ಚರಿಯಾಗಬಹುದು.

ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಮೊದಲ ಬಾರಿಗೆ ಅಹಮದಾಬಾದ್‌ಗೆ ಭೇಟಿ ನೀಡಿದ್ದೆ. 1979ರಲ್ಲಿ ಅಂದು ವೀಕ್ಷಿಸಿದ ಒಂದು ದೃಶ್ಯ ಈಗಲೂ ನನ್ನ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಅದೇ ಗಾಡಿ ಎಳೆಯುವ ಮಹಿಳೆಯರು. ಕಳೆದ ವರ್ಷ ಈ ದೃಶ್ಯಗಳು ಕಾಣಸಿಗಲಿಲ್ಲ. ಬದಲಿಗೆ ಒಂಟೆಗಾಡಿಗಳಿದ್ದವು. ಸರಕನ್ನು ಸಾಗಿಸಲು ಮಾತ್ರ ಬಳಸಲ್ಪಡುತ್ತಿದ್ದವು.

ಗುಜರಾತ್ ವಧುದಹನ, ವರದಕ್ಷಿಣೆಗೆ ಹೆಸರುವಾಸಿಯಾದದ್ದೆಂದು ಓದಿದ ಜ್ಞಾಪಕ. ಆದರೆ ಮಹಿಳೆಯರು ಸ್ವತಂತ್ರವಾಗಿ ಅಡ್ಡಾಡಲು ಯಾವುದೇ ಭೀತಿಯಿಲ್ಲ. ಇದರ ಬಗ್ಗೆಯೂ ನಮಗೆ ಮಾಹಿತಿ ನೀಡಿದ್ದರು. ಅದು ನಮ್ಮ ಅನುಭವಕ್ಕೂ ಬಂದಿತು. ನಾವು ದ್ವಾರಕಾದಲ್ಲಿನ ನಾಗೇಶ್ವರ (19ಕಿ.ಮೀ) ಭೇಟ್ ದ್ವಾರಕದ (30 ಕಿಮೀ) ದೂರವನ್ನು ನಿರ್ಜನ ಪ್ರದೇಶದಲ್ಲಿ ಆಟೋದಲ್ಲೇ ಸಂಚರಿಸಿದ್ದೆವೆಂದರೆ ಮತ್ತಷ್ಟು ಅಚ್ಚರಿಯಾಗಬಹುದಲ್ಲವೇ? ಧೈರ್ಯ ಮತ್ತು ಸ್ನೇಹ ಮನೋಭಾವಗಳಿದ್ದಲ್ಲಿ ಜನರ ಸಹಕಾರ ನಮಗಿದ್ದೇ ಇರುತ್ತದೆ. ಹಾಗಾಗಿ ನಮಗೆಲ್ಲಿಯೂ ಕಹಿ ಪ್ರಸಂಗಗಳು ಎದುರಾಗಲಿಲ್ಲ. ನಮ್ಮ ಮರುಪ್ರಯಾಣದ ಸಂದರ್ಭದಲ್ಲಿ ವಿದ್ಯಾ ಬೆಹನ್ ಎಂಬುವರ ಪರಿಚಯವಾಯಿತು. ವರದಕ್ಷಿಣೆಗೆ ಸಂಬಧಿಸಿದಂತೆ ವಧುದಹನ ನಡೆಯುತ್ತಿರುವ ಘಟನೆಗಳ ಬಗ್ಗೆ ಪ್ರಶ್ನಿಸಿದಾಗ 'ಅದು ವ್ಯವಹಾರ' ಎಂದಷ್ಟೆ ಉತ್ತರಿಸಿದರು. ಹೆಣ್ಣು ಮಕ್ಕಳಿಗೆ ಶಿಕ್ಷಣ ದೊರೆಯುತ್ತಿರುವುದರಿಂದ ತಮ್ಮ ಸಮಸ್ಯೆಗಳನ್ನು ತಂದೆ ತಾಯಿಯರಲ್ಲಿ ಹೇಳಿಕೊಳ್ಳುತ್ತಿದ್ದಾರೆ. (ಮೊದಲು ಹಾಗಿರಲಿಲ್ಲ) ಆದ್ದರಿಂದ ಅಂತಹ ಘಟನೆಗಳು ಕಡಿಮೆಯಾಗುತ್ತಿವೆಂದು ತಿಳಿಸಿದರು. ಅಲ್ಲದೆ ಹೆಣ್ಣು ಮಕ್ಕಳು ಈ ನಾಡಿನಲ್ಲಿ ಸ್ವತಂತ್ರವಾಗಿ ಸಂಚರಿಸುವಷ್ಟು ಇನ್ನಲ್ಲಿಯೂ ಸಂಚರಿಸಲಾರರು. ಇದು ನಿಮ್ಮ ಅನುಭವಕ್ಕೆ ಬಂದಿರಬೇಕಲ್ಲ' ಎಂದು ಪ್ರಶ್ನಿಸಿದರು. ಅದು ಹೌದೆಂದು ನಮಗನ್ನಿಸಿತು. ಅನೇಕ ಯುವತಿಯರ ಅಭಿಪ್ರಾಯ ಹೀಗಿತ್ತು. 'ಇಲ್ಲಿ ಮಧ್ಯರಾತ್ರಿ 12.1 ಗಂಟೆಗೂ ನಮ್ಮ ಸಣ್ಣ ವಾಹನಗಳಲ್ಲಿ ನಮ್ಮ ಕಚೇರಿಯಿಂದ ಮನೆಗೆ ತಲುಪಲು ಯಾವ ಹೆದರಿಕೆ ಇಲ್ಲ' ಎಂಬುದಾಗಿ ನಮಗೆ ತಿಳಿಸಿದರು. ನಮಗೂ ಅದರ ಅನುಭವ ಆಗಿತ್ತು. ದಕ್ಷಿಣದವರಾದ ನಾವು ಮೊದಲ ಬಾರಿಗೆ ಗುಜರಾತ್‌ನಲ್ಲಿ ಯಾವ ಅಳುಕಿಲ್ಲದೇ ಹೆಚ್ಚಿನ ಸ್ಥಳಗಳಿಗೆ ಅಲ್ಲಿಯ ಸರಕಾರಿ ಬಸ್ಸುಗಳಲ್ಲೇ ಸಂದರ್ಶಿಸಿದ್ದೆವು.

ಪಾಶ್ಚಾತ್ಯರ ದುಶ್ಚಟಗಳನ್ನು ಅನುಕರಣೆ ಮಾಡುವ ಬದಲು ಒಳ್ಳೆಯ ಹವ್ಯಾಸಗಳನ್ನು ಗಮನಿಸಬಾರದೇಕೆ? ದುಡಿಮೆಯ ಆಯಾಸವನ್ನು ಪರಿಹರಿಸಿಕೊಳ್ಳಲು ವಾರಕ್ಕೊಮ್ಮೆ ಪ್ರವಾಸ ಹೋಗುವ ಪರಿಪಾಠ ಪಾಶ್ಚಾತ್ಯರಲ್ಲಿದೆ. ವಾರಕ್ಕೊಮ್ಮೆ ನಮ್ಮಿಂದ ಸಾಧ್ಯವಿಲ್ಲ. ವರ್ಷ ನಾಲ್ಕು

ವರ್ಷಗಳಿಗೊಮ್ಮೆಯಾದರೂ ಸಣ್ಣ ಮಟ್ಟಿಗಿನ ಪ್ರವಾಸವನ್ನಾದರೂ ಕೈಗೊಳ್ಳಬಹುದಲ್ಲವೆ? ದೇಶದ ವಿವಿಧ ಭಾಗಗಳಲ್ಲಿ ಸಂಚರಿಸುವುದರಿಂದ ವೈವಿಧ್ಯಮಯ ವಾತಾವರಣದ ರ್ಶನವಾಗುತ್ತವೆ. ಪರಿಸರ ಬದಲಾವಣೆಯಿಂದಾಗಿ ವ್ಯಕ್ತಿಯಲ್ಲಿ ಹೊಸತನ ಕಂಡುಬರುತ್ತದೆ. ಅನಾರೋಗ್ಯಕರ ಮನಸ್ಸು ಆರೋಗ್ಯವಾಗಿರುತ್ತದೆ. ಉತ್ಸಾಹ ಇಮ್ಮಡಿಯಾಗುತ್ತದೆ. ಸದಾ ಚಟುವಟಿಕೆಯಿಂದಿರಲು ಸಾಧ್ಯವಾಗುತ್ತದೆ. ಅವರವರ ಅಭಿರುಚಿಗೆ ತಕ್ಕಂತೆ ಶೈಕ್ಷಣಿಕ, ಸಾಂಸ್ಕೃತಿಕ, ಧಾರ್ಮಿಕ, ಐತಿಹಾಸಿಕ ಪ್ರವಾಸಗಳನ್ನು ಏರ್ಪಡಿಸುವ ಸಂಸ್ಥೆಗಳು ಇವೆ. ಅವುಗಳ ಪ್ರಯೋಜನ ಪಡೆದುಕೊಳ್ಳುವುದು ನಮ್ಮನ್ನವಲಂಬಿಸಿದೆ. ಒಟ್ಟಿನಲ್ಲಿ ವಿವಿಧ ಮೌಲ್ಯಗಳ ಒಗ್ಗೆ ಚಿಂತಿಸಲು ಅವಕಾಶ ಲಭಿಸುತ್ತದೆ. ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಉತ್ತಮ ಸಾಧನವೇ ಪ್ರವಾಸ.

---

## ನಿನಗೇಕೆ ?

ನಿನಗೇಕೆ ಬೇಕು ?
ನನ್ನ ನೋವ
ಹಂಚಿಕೊಳ್ಳುವ ಹಟವು
ಒಡಲ ಬೆಂಕಿಗ
ತಂಪೆರೆಯುವ ಛಲವು.

ಇವರೇ ನೋಡು
ನನ್ನ ಜನರು
ಅವರ ಕೈಗಳಲಿ
ಬರಿಯ ಆಯುಧಗಳು
ನಿನಗೋ।
ಆದಕ್ಕೆಲ್ಲ ಎದೆಯೊಡ್ಡಿ
ನಿಲ್ಲುವ ಉತ್ಸಾಹವು
ಹೃದಯ ಕಳೆದುಕೊಂಡವರಲ್ಲಿ
ಕಿವುಡ ಮೂಕರಲ್ಲಿ
ಪ್ರೇಮ ಸಂದೇಶ
ಹರಡುವ ಹವ್ಯಾಸವು
ನಿನ್ನಂಥವರು ನೂರಾರು
ರಕ್ತ ಚೆಲ್ಲಿದರು
ದುಷ್ಟರ ಕೂಟಕೆ
ಬಲಿಯಾಗಿ ಹೋದರು
ಕತೆಗಳಲ್ಲ ಅವು
ಎಂಬುದನು ತಿಳಿದೂ
ನೀನೇಕೆ ಬಂದೆ
ಪ್ರಾಣವನು ಕೊಡಲು

ಉಜ್ವಲ ಪುಣಜಗೌಡ

# ಮಹಿಳಾ ಚಳುವಳಿ : ಜಾಗೃತಿಯತ್ತ ದಿಟ್ಟ ಹೆಜ್ಜೆಗಳು

ಕೆ. ರಾಜೇಶ್ವರಿಗೌಡ

ಜಗತ್ತಿನ ಇತಿಹಾಸದಲ್ಲಿ ಕಂಡು ಬರುವ ಗುಲಾಮಗಿರಿ ವ್ಯವಸ್ಥೆ, ಊಳಿಗಮಾನ್ಯ ವ್ಯವಸ್ಥೆ, ಬಂಡವಾಳಶಾಹಿ ವ್ಯವಸ್ಥೆ–ಈ ಎಲ್ಲ ಶೋಷಿತ ವ್ಯವಸ್ಥೆಗಳೂ ಪುರುಷ ಪ್ರಧಾನವಾದವುಗಳೇ. ಹೆಣ್ಣಿಗೆ ಈ ವ್ಯವಸ್ಥೆಗಳಲ್ಲಿ ಯಾವುದೇ ರೀತಿಯ ಮೌಲ್ಯಗಳಾಗಲೀ, ಉನ್ನತ ಸ್ಥಾನ ಮಾನಗಳಾಗಲೀ ಸಿಗುತ್ತಿರಲಿಲ್ಲ. ಪುರುಷನ ಅಧೀನಳಾಗಿ, ಅವನ ಕೈಗೊಂಬೆಯಾಗಿ ದುರ್ಭರ ಬದುಕನ್ನು ಸವೆಸುತ್ತಿದ್ದಳು.

ಭಾರತದಲ್ಲಂತೂ 'ಸತಿಪದ್ಧತಿ'ಯಂತಹ ಕ್ರೂರ ಹಾಗೂ ಅಮಾನುಷವಾದ ಕಂದಾಚಾರ ರೂಢಿಯಲ್ಲಿತ್ತು. ಗಂಡನ ಮರಣಾನಂತರ ಆತನ ಪತ್ನಿ ಬದುಕಿರಬಾರದೆಂಬ ಪರಿಕಲ್ಪನೆಯ ಬಗೆಗಿನ ಉಲ್ಲೇಖವನ್ನು ಖಂಡಿತವಾಗಿಯೂ ವೈದಿಕ ಸಾಹಿತ್ಯದಲ್ಲಿ ಕಾಣಲಾಗುವುದಿಲ್ಲ; ಅದು ಅನಾರ್ಯ ನಂಬಿಕೆಯೇ ಸರಿ.

ಜಗತ್ತಿನ ಇತರೆಡೆಗಳಲ್ಲೂ ಹೆಣ್ಣಿನ ಸ್ಥಿತಿ ಅತ್ಯಂತ ಘೋರವೇ ಆಗಿದ್ದಿತು. ಮಧ್ಯಕಾಲೀನ ಫ್ರಾನ್ಸಿನಲ್ಲಿ ಹುಟ್ಟುವ ಮಗು ರಾಜನದೇ ಎಂದು ಖಚಿತಪಡಿಸಿಕೊಳ್ಳಲು ಆಸ್ಥಾನ ಪ್ರಮುಖರ ಎದುರಿನಲ್ಲಿ ರಾಣಿ ಮಗುವನ್ನು ಹೆರಬೇಕಾದ ದುರಂತ ಪರಿಸ್ಥಿತಿ ಇದ್ದಿತು. ಬೈಬಲ್ ಮುಟ್ಟುವುದಾಗಲೀ, ಮತ ಚಲಾವಣೆ ಮಾಡುವುದಾಗಲೀ ಹೆಂಗಸಿನ ಹಕ್ಕುಗಳಾಗಿರಲಿಲ್ಲ.

ರಷ್ಯಾ, ಅಮೇರಿಕಾ, ಯೂರೋಪ್ ಮುಂತಾದೆಡೆಗಳಲ್ಲಿ ಸಮಾನತೆ ಮತ್ತು ಪ್ರಜಾಸತ್ತೆಗಳ ಪರವಾಗಿ ನಡೆದ ಹೋರಾಟಗಳಲ್ಲಿ ಸ್ತ್ರೀಯರದೂ ಬಹುಮುಖ್ಯ ಪಾತ್ರವಾಗಿದ್ದಿತು. ಆ ಸಂದರ್ಭದಲ್ಲೇ ಪುರುಷ ದಬ್ಬಾಳಿಕೆಯ ವಿರುದ್ಧ ಸ್ತ್ರೀವಾದಿಗಳು ಸಮಾನ ಹಕ್ಕುಗಳಿಗಾಗಿ ನಡೆಸಿದ ಹೋರಾಟದ ಪ್ರಭಾವ ಸಹಜವಾಗಿಯೇ ಜಗತ್ತಿನ ಇತರೆಡೆಗಳಲ್ಲೂ ಹಬ್ಬತೊಡಗಿತು.

ಭಾರತದಲ್ಲಿ ಸ್ತ್ರೀ ಪ್ರಗತಿಪರವಾದ ಹೋರಾಟಕ್ಕೆ ಕಾರಣಕರ್ತರಾದ ಇಬ್ಬರು ವಿಚಾರವಾದಿ ಮಹನೀಯರೆಂದರೆ- ಸತಿಪದ್ಧತಿಯನ್ನು ನಿಲ್ಲಿಸಲು ಯತ್ನಿಸಿದ ರಾಜರಾಂ ಮೋಹನರಾಯ್ ಹಾಗೂ ವಿಧವಾ ವಿವಾಹಕ್ಕಾಗಿ ಹೋರಾಟ ನಡೆಸಿದ ಈಶ್ವರಚಂದ್ರ ವಿದ್ಯಾಸಾಗರ್ ಅವರುಗಳು. ತುಂಬಾ ವಯಸ್ಸಾನ ಮುದುಕರು ಚಿಕ್ಕ ಹಾಗೂ ಮುಗ್ಧ ಬಾಲಕಿಯರನ್ನು ಮದುವೆಯಾಗುತ್ತಿದ್ದರು. ಮುಂದೆ ಬಹು ಬೇಗ ಮುದುಕ ತೀರಿಕೊಂಡರೆ, ಆ ಹೆಣ್ಣು ಬದುಕಿನುದ್ದಕ್ಕೂ ವಿಧವೆಯಾಗಿ ಅಸಹನೀಯ ಬಾಳುವೆಯನ್ನು ಮಾಡಬೇಕಾಗುತ್ತಿತ್ತು. ಅಂತಹ ಹೆಣ್ಣುಗಳ ದುಃಖಪೂರಿತ ಆಕ್ರಂದನಕ್ಕೆ 'ವಿಧವಾ ವಿವಾಹ' ಒಂದು ಸಾಂತ್ವನವಾಯಿತು, ಭರವಸೆಯಾಯಿತು.

ಮುಂದೆ ಸ್ತ್ರೀಗೆ ವಿದ್ಯಾಭ್ಯಾಸ ದೊರಕಿದಂತೆ ಆಕೆಯ ಚಿಂತನ ಶೀಲತೆ ಹೆಚ್ಚು ಸೂಕ್ಷ್ಮವಾಗುತ್ತಾ ಹೋಯಿತು. ರೂಢಿಗತವಾದ ಹಳೆಯ ಕಂದಾಚಾರಗಳನ್ನು ಧಿಕ್ಕರಿಸಿ, ಉಪಯುಕ್ತ ಮೌಲ್ಯಗಳನ್ನು ಸ್ವೀಕರಿಸಿ ಅಳವಡಿಸಿಕೊಳ್ಳಲು ಬಯಸಿದ ಆಕೆಯ ಚಲನಶೀಲ ಬದಲಾವಣೆಗಳನ್ನು ಸಮಾಜ ವಿಶಾಲವಾಗಿ ಒಪ್ಪಿಕೊಳ್ಳಲಿಲ್ಲ. ಸ್ತ್ರೀ ಪ್ರಗತಿಪರ ಘೋಷಣೆಗೆ ನಕಾರದ ಅಪಸ್ವರ ನಿರಂತರವಾಗಿರುವುದನ್ನು ನಿತ್ಯ ನಿತ್ಯ ಕೇಳುತ್ತಿದ್ದೇವೆ. ವರದಕ್ಷಿಣೆಯ ನೆಪಕ್ಕೆ ಬಲಿಯಾಗುತ್ತಿರುವ, ಅತ್ಯಾಚಾರದ ಕೂಪಕ್ಕೆ ಬೀಳುತ್ತಿರುವ, ಭ್ರೂಣ ಹಂತದಲ್ಲಿರುವಾಗಲೇ ಛಿದ್ರವಾಗುತ್ತಿರುವ ಭೀಭತ್ಸ ಘಟನೆಗಳು ಪುರುಷ ಪ್ರಧಾನ ಸಮಾಜದ ಅನಾಗರೀಕ ವರ್ತನೆಗಳಿಗೆ ಘೋರ ಸಾಕ್ಷಿಗಳಾಗಿವೆ.

ವರದಕ್ಷಿಣೆ ಪಿಡುಗು, ಅತ್ಯಾಚಾರ, ಹೆಣ್ಣು ಶಿಶುಹತ್ಯೆ ಈ ಎಲ್ಲಾ ಅನ್ಯಾಯಗಳ ವಿರುದ್ಧ ಮಹಿಳಾ ಚಳುವಳಿ ನಡೆಯುತ್ತಲೇ ಇದೆ. ಬೀದಿ ನಾಟಕಗಳ ಮೂಲಕ, ಭಾಷಣ, ಒರವಣಿಗೆಗಳ ಮೂಲಕ, ಭಿತ್ತಿಚಿತ್ರಗಳ ಮೂಲಕ, ಸಮಾವೇಶಗಳ ಮೂಲಕ ಸ್ತ್ರೀಯರ ಮೂಲಭೂತ ಹಕ್ಕುಗಳ ಬಗ್ಗೆ ಜನತೆಗೆ ತಿಳುವಳಿಕೆ ಮೂಡಿಸುವ ಗಟ್ಟಿ ಪ್ರಯತ್ನಗಳು ಅವ್ಯಾಹತವಾಗಿ ನಡೆಯುತ್ತಲೇ ಇದೆ.

ಬೌದ್ಧಿಕ ಪ್ರಗತಿ ಯಾವುದೇ ದೇಶದ ಸಾಮಾಜಿಕ ಪ್ರಗತಿಯ ಅಭಿನ್ನ ಅಂಗ. ಜ್ಞಾನ-ವಿಜ್ಞಾನಕ್ಕೆ ಸಂಬಂಧಿಸಿದ ಎಲ್ಲಾ ಕ್ಷೇತ್ರಗಳಲ್ಲೂ ಪ್ರಗತಿಪರ ರಾಷ್ಟ್ರಗಳಲ್ಲಿ ಸ್ತ್ರೀಯರ ಬೌದ್ಧಿಕ ಚಿಂತನೆಯ ಕೊಡುಗೆಗೆ ಕೊರತೆಯಿಲ್ಲ

ವಾದರೂ, ಅದಕ್ಕೆ ಎಲ್ಲಾ ಕ್ಷೇತ್ರಗಳಲ್ಲೂ ಅವಕಾಶಗಳು ಮುಕ್ತವಾಗಿಲ್ಲ. ಹಾಗಾಗಿ ಇದೊಂದು ದೋಷವೇ ಸರಿ.

ಮಹಿಳೆಯರಿಗೆ ಶಿಕ್ಷಣ ಸೌಲಭ್ಯಗಳು ಸಮರ್ಥವಾಗಿ ದೊರಕಿ, ಆ ಮೂಲಕ ಆಕೆಯ ಚಿಂತನೆ, ಶ್ರಮಗಳ ಫಲ ದೇಶವನ್ನು ಮುನ್ನಡೆಸುವಲ್ಲಿ ಬಹು ಮುಖ್ಯ ಪಾತ್ರವೆನಿಸುತ್ತದೆ. ದುರಂತವೆಂದರೆ, ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬೃಹತ್ ಪ್ರಮಾಣದಲ್ಲಿ ಅವಿದ್ಯಾವಂತರಿದ್ದಾರೆ. ಇಂದು ಇಪ್ಪತ್ತೊಂದನೇ ಶತಮಾನದಲ್ಲಿ ಏನೆಲ್ಲಾ ಪ್ರಗತಿಪರ ಸಾಧನೆಗಳನ್ನು ಮಾಡಿದ್ದರೂ, ಅದನ್ನೂ ಮೀರಿದ ವಿಷಾದಕರ ಸಂಗತಿಯೇ ಸರಿ.

ವ್ಯಕ್ತಿಯ ವ್ಯಕ್ತಿತ್ವಕ್ಕೆ ಸಭ್ಯತೆ, ಸುಸಂಸ್ಕೃತಿಯ ಚೌಕಟ್ಟನ್ನು ಒದಗಿಸುವುದೇ ನಿಜವಾದ ಶಿಕ್ಷಣ, ಆದರೆ ಇಂದಿನ ಶಿಕ್ಷಣ 'ಹೊಟ್ಟೆ ಪಾಡಿಗಾಗಿ ವಿದ್ಯೆ' ಎಂಬ ಸೀಮಿತ ಅರ್ಥವನ್ನು, ಯಾಂತ್ರಿಕತೆಯನ್ನು ಪಡೆದು ಪೇಲವವಾಗಿದೆ.

ವಿದ್ಯಾಭ್ಯಾಸದ ಅಂತರ್ಯ, ಅರ್ಥಗಳನ್ನು ಜನತೆಗೆ ತಿಳಿಹೇಳಬೇಕು. ಆದರ ಸತ್ವ, ಅವಶ್ಯಕತೆಗಳನ್ನು ಮನದಟ್ಟು ಮಾಡಿಕೊಡಬೇಕು. ಶಿಕ್ಷಣದಲ್ಲಿ ವ್ಯಕ್ತಿತ್ವವನ್ನು ನೈತಿಕತೆಯತ್ತ ಕೊಂಡೊಯ್ಯುವ, ವಿಶಾಲ ಮನೋಭಾವವನ್ನು ನಿವಾರಿಸಿ, ಬೆಳೆಸುವ, ಜಾತಿ ಮತ್ತು ಹೆಣ್ಣು-ಗಂಡು ಬೇಧ ಭಾವಗಳನ್ನು ನಿವಾರಿಸಿ, ಸಮಾನತೆ ಜಾಗೃತವಾಗುವಂತಹ ಪಠ್ಯಗಳಿರಬೇಕು.

ಬದುಕಿಗೆ ಮಾರಕವಾಗುವ ಅನಿಷ್ಟ ಪದ್ಧತಿಗಳನ್ನೆಲ್ಲಾ ಧಿಕ್ಕರಿಸಿ, ವಿಚಾರಶಕ್ತಿ, ಪ್ರಚೋದಕರವಾದ ವಿದ್ಯೆಯಿಂದ ಗಂಡು ಹೆಣ್ಣುಗಳಲ್ಲಿ ಕ್ರಮೇಣ ಮೇಲರಿಮೆ–ಕೀಳರಿಮೆಗಳು ತೊಲಗಿ, ಸಮನ್ವಯ, ಹೊಂದಾಣಿಕೆ, ಪರಸ್ಪರ ಅಭಿಪ್ರಾಯಗಳನ್ನು ಮನ್ನಿಸುವ ಗೌರವ ಭಾವಗಳು ದಟ್ಟವಾಗಿ ಮೂಡುತ್ತವೆ.

ಇಂದು ಸ್ತ್ರೀ ಚಳುವಳಿಯ ಮುಖ್ಯ ಧ್ಯೇಯವೆಂದರೆ– ಸ್ತ್ರೀ ಪುರುಷರಿಬ್ಬರಿಗೂ ಅವರವರ ಜವಾಬ್ದಾರಿಗಳ ಬಗ್ಗೆ ಅರಿವು ಮೂಡಿಸುವುದು. ಆಗ ಮಾತ್ರ "ಸ್ತ್ರೀ ಮುಕ್ತಿ" ಚಳುವಳಿ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳಲು ಸಾಧ್ಯ ಎನ್ನಬಹುದು. ●

## ಶಿಕ್ಷಣ : ಭಾರತೀಯ ಮಹಿಳೆಯ ಬಿಡುಗಡೆಯ ಹಾದಿ

ಪದ್ಮಾ ಶಿವರುದ್ರಪ್ಪ

ಭಾರತೀಯ ಮಹಿಳೆಗೆ ಎಂದಿಗಿಂತ ಇಂದು ಶಿಕ್ಷಣದ ಅಗತ್ಯ ಹೆಚ್ಚಾಗಿದೆ. ಜಗತ್ತು ಅತ್ಯಂತ ವೇಗವಾಗಿ ಬದಲಾಗುತ್ತಿರುವ ಇಂದಿನ ಯುಗದಲ್ಲಿ, ಭಾರತವನ್ನು ಜಗತ್ತಿನೊಡನೆ ಮುನ್ನಡೆಸುವಲ್ಲಿ ಮಹಿಳೆಯ ಪಾತ್ರ ಅತ್ಯಂತ ಗಮನಾರ್ಹವಾದುದು.

ಜಗತ್ತಿನ ಬಹುತೇಕ ದೇಶಗಳಲ್ಲಿ ನಾವು ಕಾಣುವುದು ಪುರುಷ ಪ್ರಧಾನ ಸಮಾಜ ವ್ಯವಸ್ಥೆಯನ್ನು. ಸ್ತ್ರೀಯರಿಗೆ ಸಮಾನ ಹಕ್ಕುಗಳಿವೆಯೆಂದು ಹೇಳಲ್ಪಡುವ ಅನೇಕ ಪಾಶ್ಚಿಮಾತ್ಯ ದೇಶಗಳಲ್ಲಿ ಕೂಡ ಕೆಲವು ಔದ್ಯೋಗಿಕ ಕ್ಷೇತ್ರಗಳಲ್ಲಿ ಪುರುಷನಿಗಿರುವ ಪ್ರಾಧಾನ್ಯ ಸ್ತ್ರೀಗಿಲ್ಲ. ವಸ್ತುಸ್ಥಿತಿ ಹೀಗಿರುವಾಗ ಅನೇಕ ಸಾಮಾಜಿಕ ಸಂಪ್ರದಾಯ ಹಾಗೂ ಕಟ್ಟುಪಾಡಿಗೊಳಗಾದ ಭಾರತೀಯ ಸ್ತ್ರೀಯ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ.

ನಮ್ಮ ಸ್ಮೃತಿಗಳಂತೂ ಸ್ತ್ರೀ ಮತ್ತು ಶೂದ್ರ ಇಬ್ಬರನ್ನೂ ಸಮಾನರೆಂದು ಭಾವಿಸಿ ಅನೇಕ ಸವಲತ್ತುಗಳಿಂದ ಅವರನ್ನು ವಂಚಿತರನ್ನಾಗಿ ಮಾಡಿವೆ. ವೇದೋಪನಿಷತ್ತುಗಳ ಕಾಲದಲ್ಲಿ ಉಚ್ಛಸ್ಥಾನ ಪಡೆದಿದ್ದ ಭಾರತೀಯ ಸ್ತ್ರೀ ಅನೇಕ ಚಾರಿತ್ರಿಕ ಕಾರಣಗಳಿಂದಾಗಿ ಎಲ್ಲ ಹಕ್ಕುಗಳಿಂದ ವಂಚಿತಳಾದಳು. "ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೆಯೋ ಅಲ್ಲಿ ದೇವತೆಗಳು ಸಂತೋಷಪಡುತ್ತಾರೆ" ಎಂದ ಮನು "ನಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ವಿರೋಧಾಭಾಸದ ಮಾತನ್ನೂ ಆಡಿದ್ದಾನೆ. ಸ್ತ್ರೀಯನ್ನು ಸೈದ್ಧಾಂತಿಕವಾಗಿ ದೇವತೆಯನ್ನಾಗಿ ಮಾಡಿ ಪೂಜಿಸಿದ ನಮ್ಮ ಸಂಸ್ಕೃತಿ, ವಾಸ್ತವದಲ್ಲಿ ಅವಳನ್ನು ನಾಲ್ಕು ಗೋಡೆಯ ನಡುವೆ ಬಂಧಿಸಿ ಹಿಂಸಿಸಿತು. ಬಾಲ್ಯದಲ್ಲಿ ತಂದೆಯ ಆಧೀನ, ಯೌವನದಲ್ಲಿ ಗಂಡನ ಅಧೀನ ಮುಪ್ಪಿನಲ್ಲಿ ಮಕ್ಕಳ ಅಧೀನಕ್ಕೆ ಹೆಣ್ಣನ್ನು ಒಳಪಡಿಸಿದ ನಮ್ಮ ಸಾಮಾಜಿಕ ವ್ಯವಸ್ಥೆ ಅವಳನ್ನು ಅನೇಕ ರೀತಿಯಲ್ಲಿ ಶೋಷಿಸಿತು. ವೈಧವ್ಯ, ಪಾತಿವ್ರತ್ಯ, ಸತಿ–ಹೀಗೆ ಅನೇಕ ಸಂಪ್ರದಾಯಗಳ ಹೆಸರಿನಲ್ಲಿ ಅವಳ ಮೇಲೆ ದಬ್ಬಾಳಿಕೆ

ನಡೆಯುತ್ತು. ಈ ಎಲ್ಲ ಶೋಷಣೆಗೆ, ಕ್ರೌರ್ಯಕ್ಕೆ ಅವಳು ಒಳಗಾದುದಕ್ಕೆ ಮುಖ್ಯ ಕಾರಣವೆಂದರೆ ಅವಳು ವಿದ್ಯಾಭ್ಯಾಸದಿಂದ ವಂಚಿತಳಾದದ್ದು, ಮೇಲ್ವರ್ಗದ ಜನ ಮತ್ತು ಪುರುಷರು ಕ್ರಮವಾಗಿ ಕೆಳವರ್ಗ ಮತ್ತು ಸ್ತ್ರೀಯರನ್ನು ವಿದ್ಯಾಭ್ಯಾಸದಿಂದ ವಂಚಿತರನ್ನಾಗಿ ಮಾಡಿ ಅವರನ್ನು ಅಜ್ಞಾನದ ಕತ್ತಲಿನಲ್ಲಿಟ್ಟು ತಮ್ಮ ಸ್ವಾರ್ಥ ಸಾಧನೆ ಮಾಡಿಕೊಳ್ಳಲು ಬಯಸಿದರು.

ಈ ಶೋಷಣೆಯಿಂದ ಹೊರಬಂದು ಹೆಣ್ಣು ಜಾಗೃತಳಾಗಿ ಆತ್ಮಾಭಿಮಾನದಿಂದ ಬದುಕಬೇಕಾದರೆ ಅವಳಿಗೆ ಶಿಕ್ಷಣ ಅತ್ಯಗತ್ಯ ಎಂದು ಮನಗಂಡ ರಾಜಾರಾಮ ಮೋಹನರಾಯ್, ಅನಿಬೆಸೆಂಟ್, ಗಾಂಧೀಜಿ ಮುಂತಾದ ಮಹನೀಯರು ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ಹೋರಾಡಿ ಅದನ್ನು ಸಾಕಾರಗೊಳಿಸಿದರು. ದೇಶವನ್ನು ಉದ್ಧರಿಸುವುದು ಸುಶಿಕ್ಷಿತ ಸ್ತ್ರೀಯಿಂದ ಮಾತ್ರ ಸಾಧ್ಯ ಎಂದು ನಂಬಿದ್ದರು. ಗಾಂಧೀಜಿ ಅನೇಕ ಮಹನೀಯರ ಶ್ರದ್ಧೆ ತ್ಯಾಗ, ಶ್ರಮಗಳಿಂದ, ಭಾರತೀಯ ಮಹಿಳೆಯರು ವಿದ್ಯಾವತಿಯರಾಗಿ ಇಂದು ಅನೇಕ ಕ್ಷೇತ್ರಗಳಲ್ಲಿ ಪುರುಷರಿಗೆ ಸಮಾನವಾಗಿ ಮುನ್ನಡೆಯುತ್ತಿದ್ದಾರೆ.

1993ನೆಯ ವರ್ಷವನ್ನು ಸಂಪೂರ್ಣ ಸಾಕ್ಷರತಾ ವರ್ಷವನ್ನಾಗಿ ಆಚರಿಸುತ್ತಿದೆ ನಮ್ಮ ಸರ್ಕಾರ. ಸ್ವಾತಂತ್ರ್ಯ ಬಂದು ಇಷ್ಟು ದೀರ್ಘಕಾಲ ಕಳೆದಿದ್ದರೂ, ಸಾಕ್ಷರತೆಯ ಹಾದಿಯಲ್ಲಿ ನಾವು ನಡೆಯಬೇಕಾದ ಹಾದಿ ಬಹಳ ದೂರವಿದೆ. ಸಾಕ್ಷರಳಾದ ಸ್ತ್ರೀ ಇಂದು ಜಾಗೃತಳಾಗಿ ಶೋಷಣೆಯಿಂದ ಹೊರಬಂದಿದ್ದಾಳೆಯೇ ಎಂಬ ಪ್ರಶ್ನೆಗೆ ಇಲ್ಲವೆಂದೇ ಉತ್ತರಿಸಬೇಕಾಗುತ್ತದೆ. ವಿದ್ಯಾಭ್ಯಾಸ ಇಂದಿನ ಹೆಣ್ಣನ್ನು ಆರ್ಥಿಕವಾಗಿ ಸ್ವತಂತ್ರಳನ್ನಾಗಿ ಮಾಡಿರಬಹುದು. ಆದರೆ ಅಂಥ ಸಂಪ್ರದಾಯಗಳಿಂದ ಸಾಮಾಜಿಕ ಕಟ್ಟುಪಾಡುಗಳಿಂದ ಗಂಡನ ದಬ್ಬಾಳಿಕೆಯಿಂದ ವರದಕ್ಷಿಣೆಯ ಕಾಟದಿಂದ ಹೊರಬಂದು ಜಗತ್ತನ್ನು ದಿಟ್ಟವಾಗಿ ಎದುರಿಸುವುದು ನಮ್ಮ ಸ್ತ್ರೀಯರಿಗೆ ಇನ್ನೂ ಸಾಧ್ಯವಾಗಿಲ್ಲ. ಎಲ್ಲಿಯವರೆಗೆ ಹೆಣ್ಣು ತನ್ನ ಮೇಲೆ ನಡೆಯುವ ದೌರ್ಜನ್ಯ, ಅನ್ಯಾಯಗಳನ್ನು ಎದುರಿಸುವ ಶಕ್ತಿಯನ್ನು ಪಡೆದುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವಳು ಸಾಕ್ಷರಳಾದರೂ ಸಂಪೂರ್ಣ ಅರ್ಥದಲ್ಲಿ ವಿದ್ಯಾವಂತೆಯಲ್ಲ ಎಂದೇ ಹೇಳಬೇಕಾಗುತ್ತದೆ.

ಇದು ನಮ್ಮ ನಗರದ ಮಹಿಳೆಯರ ಸ್ಥಿತಿಯಾದರೆ, ಗ್ರಾಮೀಣ ಮಹಿಳೆಯರ ಸ್ಥಿತಿ ಇನ್ನೂ ಶೋಚನೀಯ. ಸಾಕ್ಷರತೆ ನಮ್ಮ ಗ್ರಾಮೀಣ ಮಹಿಳೆಯರಿಗೆ ಇನ್ನೂ ತಲುಪಿಲ್ಲ. ಕಿತ್ತು ತಿನ್ನುವ ಅಜ್ಞಾನ, ಬಡತನ, ಅನಕ್ಷರತೆಯಿಂದ ನಮ್ಮ ಗ್ರಾಮೀಣ ಮಹಿಳೆಯರು ಇನ್ನೂ ಹೊರಬಂದಿಲ್ಲ. ಇದೆಲ್ಲದರ ಜೊತೆಗೆ ನಮ್ಮ ರಾಜಕಾರಣಿಗಳ ಸ್ವಾರ್ಥ ಗುಂಪುಗುಳಿತನಗಳೂ ಸೇರಿಕೊಂಡು ಪರಿಸ್ಥಿತಿಯನ್ನು ಇನ್ನೂ ಹದಗೆಡಿಸಿವೆ. ಗ್ರಾಮೀಣ ಹೆಣ್ಣು ಸಾಕ್ಷರಳಾಗದಿದ್ದರೆ ಗಂಡಿನ ದೌರ್ಜನ್ಯದಿಂದ, ಮೂಢನಂಬಿಕೆಗಳಿಂದ ಹೊರಬರಲು ಸಾಧ್ಯವೇ ಇಲ್ಲ. ನಮ್ಮ ಅನೇಕ ಗ್ರಾಮೀಣ ಬಡಕುಟುಂಬಗಳಲ್ಲಿ ಹೆಣ್ಣಿನ ಸಂಪಾದನೆಯ ಮೇಲೆಯೇ ಬದುಕುವ ಗಂಡು, ಕುಡಿದು ಬಂದು ಅವಳ ಮೇಲೆಯೇ ದೌರ್ಜನ್ಯ ಎಸಗುತ್ತಾನೆ. ನಮ್ಮ ಗ್ರಾಮೀಣ ಜನ ಬದುಕುತ್ತಿರುವ ಕೊಳಕು ಪರಿಸರವನ್ನು ನೋಡಿದಾಗ ನಮ್ಮ ದೇಶ ಉದ್ಧಾರವಾಗಲು ಸಾಧ್ಯವೇ ಎನಿಸುತ್ತದೆ. ಕುಟುಂಬ ಕಲ್ಯಾಣ, ನೈರ್ಮಲ್ಯ ದೇಶಪ್ರೇಮ, ಮತದಾನದ ಹಕ್ಕು, ದೇಶದ ಆಗುಹೋಗುಗಳು ಇದೆಲ್ಲದರ ಬಗೆಗೆ ನಮ್ಮ ಗ್ರಾಮೀಣ ಮಹಿಳೆಯರಲ್ಲಿ ಅರಿವು ಮೂಡಬೇಕಾದರೆ ಶಿಕ್ಷಣದಿಂದ ಮಾತ್ರ ಸಾಧ್ಯ. ಆದರೆ ತಮ್ಮ ಸ್ವಾರ್ಥ, ವಂಚನೆ, ಒಳಜಗಳಗಳಲ್ಲಿ ಮುಳುಗಿರುವ ನಮ್ಮ ರಾಜಕಾರಣಿಗಳು ಮತ್ತು ಅಧಿಕಾರಿಗಳಿಗೆ ನಮ್ಮ ಗ್ರಾಮೀಣ ಜನರನ್ನು ಸುಶಿಕ್ಷಿತರನ್ನಾಗಿ ಮಾಡುವುದಕ್ಕೆ ಸಮಯವಾದರೂ ಎಲ್ಲಿದೆ? ಆದ್ದರಿಂದ ನಮ್ಮ ನಗರಗಳ ವಿದ್ಯಾವಂತ ಮಹಿಳೆಯರು ಮತ್ತು ಖಾಸಗಿ ಸೇವಾಸಂಸ್ಥೆಗಳು ಈ ದಿಕ್ಕಿನಲ್ಲಿ ಆಸಕ್ತಿ ವಹಿಸಿ ದುಡಿಯಬೇಕಾಗಿದೆ.

ಇಂದು ಭಾರತೀಯ ಮಹಿಳೆಗೆ ದೊರಕುತ್ತಿರುವ ಶಿಕ್ಷಣದ ವ್ಯವಸ್ಥೆ ಕೂಡ ಸಮರ್ಪಕವಾಗಿಲ್ಲ. ಕೇವಲ ಕೆಲವೇ ಮಂದಿ ಪ್ರತಿಭಾವಂತ ಸ್ತ್ರೀಯರಿಗೆ ಮಾತ್ರ ಪ್ರಯೋಜನವಾಗಬಹುದಾದ, ಮದುವೆಯ ನಂತರ ಹೆಚ್ಚು ಮಂದಿ ಸ್ತ್ರೀಯರಿಗೆ ಯಾವ ಪ್ರಯೋಜನಕ್ಕೂ ಬಾರದ ಶಿಕ್ಷಣ ಇಂದು ನಮ್ಮ ಸ್ತ್ರೀಯರಿಗೆ ದೊರಕುತ್ತಿದೆ. ವಿಶ್ವವಿದ್ಯಾಲಯದ ಮಟ್ಟದಲ್ಲಂತೂ ಗುಮಾಸ್ತರನ್ನು ತಯಾರು ಮಾಡುವ ಬ್ರಿಟಿಷರ ಕಾಲದ ಏಕತಾನದ ಶಿಕ್ಷಣ ಕ್ರಮವೇ ಇಂದೂ ಮುಂದುವರಿದಿದೆ. ಅದರ ಬದಲು ಸ್ವಯಂ ಉದ್ಯೋಗಗಳಲ್ಲಿ ಸ್ತ್ರೀಯನ್ನು ತೊಡಗಿಸಬಹುದಾದ, ತನ್ನ ಕಾಲ ಮೇಲೆ ತಾನು ನಿಂತು ಆತ್ಮಾಭಿಮಾನದಿಂದ ಬದುಕಬಹುದಾದ, ತನ್ನ ಸ್ವಂತ ವ್ಯಕ್ತಿತ್ವ ರೂಪಿಸಿಕೊಳ್ಳಬಹುದಾದ ಶಿಕ್ಷಣವನ್ನು ನಮ್ಮ ಸ್ತ್ರೀಯರಿಗೆ ದೊರಕಿಸಿಕೊಡುವುದು ಹೆಚ್ಚು ವಿಹಿತವೆಂದು ತೋರುತ್ತದೆ.

●

# ಸ್ತ್ರೀ ಮತ್ತು ಸಮಾನತೆ

ಎಂ. ಉದಯ ಕುಮಾರಿ ಎಂ.ಎ.

'ಎಲ್ಲಿ ಸ್ತ್ರೀಯರನ್ನು ಪೂಜಿಸುತ್ತಾರೆಯೋ ಅಲ್ಲಿ ದೇವತೆಗಳು ನೆಲಸಿರುತ್ತಾರೆ'- ಈ ಪ್ರಾಚೀನ ಉವಾಚವನ್ನು ಗಮನಿಸಿದಾಗ ಒಂದಂಶ ಸ್ಪಷ್ಟವಾಗುತ್ತದೆ. ಅದು ಹಿಂದಿನಿಂದಲೂ ನಮ್ಮ ಪುರುಷ ಪ್ರಧಾನ ಸಮಾಜ ಸ್ತ್ರೀಯರನ್ನು ನಡೆಸಿಕೊಳ್ಳುತ್ತಿದ್ದ ರೀತಿ. ಒಂದೆಡೆ ಆಕೆಯನ್ನು ದೇವತೆಯ ಸ್ಥಾನದಲ್ಲಿಟ್ಟು ಪೂಜಿಸುವುದಾದರೆ, ಮತ್ತೊಂದೆಡೆ ದಾಸ್ಯದ ಮಟ್ಟದಲ್ಲಿ ಶೋಷಿಸುವುದು. ಆದರೆ ಹೆಣ್ಣಿನ ಅಸ್ತಿತ್ವ ಈ ಎರಡೂ ತುತ್ತ ತುದಿಗಳಿಗಿಂತ ಬೇರೆಯಾದಂತಹ ಮಾನವೀಯ ದೃಷ್ಟಿಯಿಂದ ನೋಡಬೇಕಾದ ನೆಲೆಯಲ್ಲಿದೆ ಎಂಬುದು ಗಮನಿಸಬೇಕಾದ ಸಂಗತಿ. ನಮ್ಮ ಹಿಂದಿನ ಪುರಾಣಗಳಲ್ಲಿ ಕಾವ್ಯಗಳಲ್ಲಿ ಹೆಣ್ಣನ್ನು ಆದಿಶಕ್ತಿ, ಮಾಯೆ ಎಂದೆಲ್ಲಾ ಕರೆದಿದ್ದಾರೆ. ಇಲ್ಲಿಯೂ ಕೂಡ ಆಕೆಯನ್ನು ತನಗೆ ಸಮಾನಳೆಂದು ಒಪ್ಪಿಕೊಳ್ಳುವುದಕ್ಕಿಂತ ದೈವತ್ವಕ್ಕೇರಿಸಿ ಕೈತೊಳೆದುಕೊಳ್ಳುವುದೇ ವಾಸಿ ಎಂದು ಭಾವಿಸಿರುವಂತಿದೆ.

ಹೆಣ್ಣಿಗೆ ಸಮಾನತೆ ಎಂದಾಗ ಮೊದಲು ಸಮಾನತೆಯ ಅರ್ಥವ್ಯಾಪ್ತಿಯನ್ನು ಗ್ರಹಿಸಬೇಕಾದುದು ಅವಶ್ಯಕವಾಗುತ್ತದೆ. ಇಂದು ಹೆಣ್ಣು ಗಂಡಿನ ಹಾಗೆ ಉಡುಪು ಧರಿಸುವುದಾಗಲೀ, ಗಂಡಿಗೆ ಸಮನಾಗಿ ಹೊರಗೆ ದುಡಿಯುವುದರಿಂದಾಗಲೀ, ಗಂಡಿನಷ್ಟೇ ಸ್ವೇಚ್ಛೆಯಿಂದ ತಿರುಗಾಡುವುದರಿಂದಾಗಲೀ ಗಂಡಿಗೆ ಸಮಾನಳು ಎಂಬುದನ್ನು ಸಾಧಿಸಿದಂತಾಗುವುದಿಲ್ಲ. ಅದಕ್ಕಿಂತ ಮುಖ್ಯವಾಗಿ ಹೆಣ್ಣು ಎಷ್ಟೇ ಓದಿ ವಿದ್ಯಾವಂತಳಾದರೂ, ಎಂತಹ ಉನ್ನತ ಹುದ್ದೆಯನ್ನಲಂಕರಿಸಿದರೂ ಆಕೆ ಗಂಡಿಗಿಂತ ದುರ್ಬಲಳೇ ಎಂದು ಭಾವಿಸುವ ಮನೋಧರ್ಮ ಬದಲಾಗಬೇಕಾಗಿದೆ. ಈ ಬಗೆಯ ಮನೋಭಾವನೆ ಕೇವಲ ಗಂಡಿನಲ್ಲಿ ಮಾತ್ರ ಇದೆ ಎಂದಲ್ಲ. ಇದು ಹೆಣ್ಣಿನ ಮನಸ್ಸಿನಿಂದ ಮೊದಲು ಉಚ್ಚಾಟನೆಯಾಗಬೇಕಾಗಿದೆ. ಹೆಣ್ಣಿನಲ್ಲಿ ಎಲ್ಲಿಯ ತನಕ ಈ ಬಗೆಯ ಕೀಳರಿಮೆ ಉಳಿದಿರುತ್ತದೆಯೋ ಅಲ್ಲಿಯ ತನಕ ಆಕೆ ಸಮಾನತೆಯ ಬಗ್ಗೆ ಯೋಚಿಸಲೂ ಅರ್ಹಳಲ್ಲ. ಈ ದಿಸೆಯಲ್ಲಿ ಹೆಣ್ಣಿಗೆ ದೈಹಿಕ ಶಕ್ತಿಗಿಂತ ಮಾನಸಿಕ ಸ್ಥೈರ್ಯದ ಅವಶ್ಯಕತೆ ಇದೆ ಎಂಬುದನ್ನು ಮರೆಯಲಾಗದು.

ಹಿಂದೊಮ್ಮೆ ಸ್ತ್ರೀ ವಿದ್ಯಾಭ್ಯಾಸಕ್ಕೇ ಅರ್ಹಳಲ್ಲ ಎಂದು ಭಾವಿಸಿಕೊಂಡಿದ್ದಂತಹ ಕಾಲವಿತ್ತು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಇಂದಿನ ಹೆಣ್ಣು ವಿದ್ಯಾವಂತಳಾಗಿ ಅನೇಕ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಗಂಡಿನಷ್ಟೇ ಸಮರ್ಥವಾಗಿ ದುಡಿಯುತ್ತಿದ್ದಾಳೆ. ಆದರೂ ಆಕೆಯ ಮೇಲಿನ ಶೋಷಣೆ ದೌರ್ಜನ್ಯಗಳು ಕಡಿಮೆಯಾಗುವ ಬದಲು ಬೇರೆ ಬೇರೆ ರೂಪಗಳನ್ನು ತಾಳಿವೆ, ಇಲ್ಲಿಯ ತನಕ ಕೇವಲ ಮನೆಯೊಳಗೆ ಮಾತ್ರ ಶೋಷಿತಳಾಗುತ್ತಿದ್ದವಳು ಈಗ ಮನೆಯಿಂದ ಹೊರಗೂ ಶೋಷಣೆಗೆ ಗುರಿಯಾಗುತ್ತಿದ್ದಾಳೆ. ಆ ಮೂಲಕ ಶೋಷಿಸುವ ಮಾರ್ಗ ಬದಲಾಗಿದೆಯೇ ಹೊರತು ಶೋಷಣೆ ನಿಂತಿಲ್ಲ. ಆಕೆ ದುಡಿಯುವ ಕ್ಷೇತ್ರಕ್ಕೆ ತಕ್ಕಂತೆ ತನಗಿಂತಲೂ ಮೇಲಿನ ಅಧಿಕಾರಿಗಳ ಮೂಲಕ ಶೋಷಣೆಗೊಳಗಾಗುತ್ತಿದ್ದಾಳೆ. ಇದು ಕೇವಲ ನಮ್ಮ ದೇಶದ ಸ್ತ್ರೀಯರ ಸ್ಥಿತಿ ಮಾತ್ರವಲ್ಲ. ಮುಂದುವರೆದ ರಾಷ್ಟ್ರಗಳಾದ ಅಮೆರಿಕಾ, ಜಪಾನ್‌ಗಳಲ್ಲೂ ದುಡಿಯುವ ಮಹಿಳೆಯ ಸ್ಥಿತಿ ಇದಕ್ಕಿಂತ ಹೊರತೇನಲ್ಲ.

ಇದೇ ಸಂದರ್ಭದಲ್ಲಿ ಹೇಳುವುದಾದರೆ ಇಂದು ಜಗತ್ತಿನಾದ್ಯಂತ ಮಹಿಳೆಯ ಮೇಲಿನ ಶೋಷಣೆ, ದೌರ್ಜನ್ಯಗಳನ್ನು ಖಂಡಿಸಿ, ಆಕೆಯ ಸ್ವಾತಂತ್ರ್ಯ ಸಮಾನತೆಗಳನು ಕಾಯ್ದುಕೊಳ್ಳುವ ಸಲುವಾಗಿ ಅನೇಕ ಸಂಘ-ಸಂಸ್ಥೆಗಳು ಹುಟ್ಟಿಕೊಂಡಿವೆ. ಮಹಿಳೆಯಲ್ಲಿ ಜಾಗೃತಿಯನ್ನು ಮೂಡಿಸಲು ಮಹಿಳಾ ಸಮ್ಮೇಳನಗಳನ್ನು, ಚಳುವಳಿಗಳನ್ನು ನಡೆಸುತ್ತಿದೆ. ಇಷ್ಟೆಲ್ಲಾ ಆದರೂ ಸಹ ಮಹಿಳೆಯ ಸ್ಥಿತಿ-ಗತಿಗಳಲ್ಲಿ ಯಾವುದೇ ರೀತಿಯ ಗಮನಾರ್ಹ ಬದಲಾವಣೆಗಳು ಕಂಡುಬರುತ್ತಿಲ್ಲವೆಂಬುದು ಗಮನಾರ್ಹವಾದ ಸಂಗತಿ. ಹಾಗಾಗಿ ಇಂದು ಮಹಿಳೆ ಹೆಚ್ಚು ಒಗ್ಗಟ್ಟಾಗಬೇಕಾಗಿದೆ. ಆಕೆಯ ಈ ಪ್ರಯತ್ನ ಹೋರಾಟಗಳು ಇನ್ನೂ ಹೆಚ್ಚು ಗಟ್ಟಿಯಾಗಬೇಕಾಗಿದೆ.

# ಕರ್ನಾಟಕದ ಮುಖ್ಯಮಂತ್ರಿಗಳಿಗೊಂದು ಬಹಿರಂಗ ಪತ್ರ

ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತೆಯರ ಹಾಗೂ ಸಹಾಯಕಿಯರ ಸಂಘ (ಎಚ್.ಎಂ. ಕೆ.ಪಿ.)
ವಿಮೋಚನಾ ಮಹಿಳಾ ಹಕ್ಕುಗಳ ಸಂಘಟನೆ,
ಸಿಯೆಡ್ಸ್ ಕಲೆಕ್ಟೀವ್, ಬೆಂಗಳೂರು

ಮಾನ್ಯ ಶ್ರೀ ವೀರಪ್ಪ ಮೊಯಿಲಿಯವರೆ :

ದಿನಾಂಕ 11ನೇ ಫೆಬ್ರವರಿ 1993ರಂದು ರಾಯಚೂರಿನ ಕುಪ್ಪಗಿಯಲ್ಲಿ ಸಂಶಯಾಸ್ಪದವಾಗಿ ಸಾವನಪ್ಪಿದ ಅಂಗನವಾಡಿ ಕಾರ್ಯಕರ್ತೆ ಶರಣಮ್ಮಳ ಬಗ್ಗೆ ಬಹುಶ: ನೀವೀಗ ಮರೆತಿರಬಹುದು. 22ವರ್ಷದ ಯುವತಿ ಶರಣಮ್ಮಳ ಸಾವಿಗೆ ಅಲ್ಲಿನ ತಹಶೀಲ್ದಾರ್ ಶಿವರಾಜ್, ಸರ್ಕಾರಿ ಇಂಜಿನಿಯರ್‌ಗಳಾದ ತಿಮ್ಮಪ್ಪ, ನಾರಾಯಣ ನಾಯ್ಕ ಹಾಗೂ ಸ್ಥಳೀಯ ವಕೀಲ ಫಕೀರಪ್ಪ ಇವರು ಕಾರಣ ಎಂದು ಆಪಾದಿಸಲಾಗಿದೆ. ಪ್ರಾಥಮಿಕ ವರದಿಗಳ ಪ್ರಕಾರ ಶರಣಮ್ಮಳ ಮೇಲೆ ಸಾಮೂಹಿಕ ಅತ್ಯಾಚಾರ ನಡೆದಿದ್ದು, ತತ್‌ಪರಿಣಾಮವಾಗಿ ಆಕೆ ಅತಿ ರಕ್ತಸ್ರಾವದಿಂದ ಸಾವನಪ್ಪಿದಳು ಎಂದು ಹೇಳಲಾಗಿದೆ.

ಶರಣಮ್ಮಳನ್ನು ನಿಮ್ಮಂತೆ ನಾವೂ ಮರೆತಿರಬಹುದೆಂದು ನಿಮ್ಮ ಭಾವನೆ. ಆದರೆ ಆಕೆಯ ಸಾವು ಅಸಂಖ್ಯ ದುಡಿಯುವ ಮಹಿಳೆಯರಿಗೆ ಧ್ವನಿ ನೀಡಿದೆ-ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ದುಡಿಯುವ ಮಹಿಳೆಯರಿಗೆ. ಸ್ಥಳೀಯ ಅಧಿಕಾರಶಾಹಿ ಹಾಗೂ ರಾಜಕೀಯ ಮುಖಂಡತ್ವದ ದುರುಪಯೋಗದಿಂದ ಅಮಾಯಕ ಮಹಿಳೆಯರ ಮೇಲೆ ಲೈಂಗಿಕ ದೌರ್ಜನ್ಯ ನಿರಂತರವಾಗಿ ನಡೆದಿದೆ. ಇದಕ್ಕೆ ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುವ ಮಹಿಳೆಯರು ಮೂಕ ಬಲಿಪಶುಗಳಾಗುತ್ತಾರೆ.

ಶರಣಮ್ಮಳ ಪ್ರಕರಣದ ನಂತರ 2ತಿಂಗಳ ಕಾಲ ತಲೆ ಮರೆಸಿಕೊಂಡಿದ್ದ ಆಪಾದಿತ ನಾಲ್ವರು ಇಂದು ಯಾವುದೇ ಭಯ ಭೀತಿ ಇಲ್ಲದೆ ಮತ್ತೆ ತಮ್ಮ ಅಧಿಕಾರವನ್ನು ಪುನರ್ ಸಾಭೀತುಗೊಳಿಸುವಂತೆ ಕುಪ್ಪಗಿಯ ಬೀದಿಗಳಲ್ಲಿ ಮೆರೆಯುತ್ತಿದ್ದಾರೆ.

ಕೆಲ ರಾಜಕೀಯ ಮುಖಂಡತ್ವದಿಂದ ತಮಗೆ ಶ್ರೀ ರಕ್ಷೆ ಇರುವಾಗ, ಸ್ಥಳೀಯ 'ಪೋಲೀಸ್ ತಮ್ಮನ್ನು ಹಿಡಿದು ಬಂಧಿಸಲು ಯಾವುದೇ ಪ್ರಯತ್ನ ಮಾಡದಿರುವಾಗ; ತರಾತುರಿಯಲ್ಲಿ ಸಿದ್ಧಗೊಂಡು ಹೊರಬಂದಿರುವ ಸಿ.ಓ.ಡಿ. ವರದಿ ಶರಣಮ್ಮಳ ಸಾವು ಸಹಜವಾಗಿ ಸಂಭವಿಸಿದೆ (ಕ್ಯಾನ್ಸರ್‌ನಿಂದಾಗಿ) ಎಂದು ಘೋಷಿಸಿರುವಾಗ; ಇತ್ತ ತಮ್ಮ ಸಮುದಾಯದ ಘನತೆ ಗೌರವಗಳನ್ನು ಎತ್ತಿ ಹಿಡಿಯುವ ಹವಣಿಕೆಯಲ್ಲಿ ಶರಣಮ್ಮಳ ಮೇಲೆ ಅತ್ಯಾಚಾರ ನಡೆದಿಲ್ಲ ಎಂದು ಶರಣಮ್ಮಳ ಕುಲದವರೇ ವೃಥಾ ಹೇಳಿಕೊಳ್ಳುತ್ತಿರುವಾಗ ಆ ಅಪರಾಧಿತರಾದರೂ ಏಕೆ–ಯಾರಿಗೆ ಹೆದರಬೇಕು ಹೇಳಿ?

ಅವರೆಲ್ಲ ಹೇಳುತ್ತಾರೆ : ಸದರಿ ನಾಲ್ವರನ್ನು ಅಪರಾಧಿಗಳು ಎಂದು ಹೇಳಲು ಯಾವುದೇ ಸಾಕ್ಷ್ಯಾಧಾರಗಳಿಲ್ಲ– ಅತ್ಯಾಚಾರ ಕಂಡ ಯಾವುದೇ ಪ್ರತ್ಯಕ್ಷದರ್ಶಿ ಇಲ್ಲ, ಅಷ್ಟೇಕೆ ಶರಣಮ್ಮಳ ಸ್ವಂತ ತಾಯಿಯೇ ಹೇಳುತ್ತಾರೆ: 'ಆಕೆಗೆ ಕ್ಯಾನ್ಸರ್ ಇತ್ತು. ಅದರಿಂದ ಆಕೆ ಸತ್ತಳು' ಎಂದು. ಆದರೆ ಈ ಬಗ್ಗೆ ಸತ್ಯವನ್ನು ಹೇಳಬಯಸುವ ಧ್ವನಿಗಳನ್ನು ನೀವು ಕೇಳಲು ನಿರಾಕರಿಸಿದ್ದೀರಿ. ತಮ್ಮ ಅಧಿಕಾರಿಗಳಿಂದ ಲೈಂಗಿಕ ದೌರ್ಜನ್ಯಕ್ಕೊಳಗಾಗಿ ಪ್ರತಿನಿತ್ಯ ಜೀವನ್ಮರಣಗಳ ನಡುವೆ ನರಳುತ್ತಿರುವ ನೂರಾರು ಶರಣಮ್ಮಗಳು ಇನ್ನೂ ಇದ್ದಾರೆ. ಆದರೆ ಇವರೆಲ್ಲಾ ಶರಣಮ್ಮಳ ಕಥೆಯೇ ಹೀಗಾದಾಗ ನಾವು ಮಾತನಾಡಿದರೆ ಆಗುವುದಾದರೂ 'ಏನು' ಎಂದು ನಮ್ಮನ್ನು ಕೇಳುತ್ತಾರೆ. ನಿಮ್ಮ ಸರ್ಕಾರದ ರಕ್ಷಣಾ ರಹಿತ ನಿಲುವುಗಳು ಅವರೆಲ್ಲರ ನ್ಯಾಯಯುತ ನೋವಿನ ಧ್ವನಿಗಳನ್ನು ನಿಶ್ಯಬ್ಧಗೊಳಿಸುತ್ತದೆ. ಇದು ನಿಮಗೆ ಸಮ್ಮತವೇ? ಆಪಾದಿತ ನಾಲ್ವರು ಕುಪ್ಪಗಿಯಲ್ಲಿ ಮನೆಯೊಂದನ್ನು ಖಾಸಗಿ ಕ್ಲಬ್ಬಾಗಿ ಪರಿವರ್ತಿಸಿ ಅಲ್ಲಿ ಕುಡಿತ, ವ್ಯಭಿಚಾರ ಮುಂತಾದ ಅಶ್ಲೀಲ ದುರ್ನಡತೆಗಳ ಬಗ್ಗೆ ಅಲ್ಲಿನ ಜನರ ಮುಕ್ತವಾಗಿ ಮಾತನಾಡುವ ಧ್ವನಿಗಳನ್ನು ನೀವು ನಿಷ್ಕ್ರಿಯಗೊಳಿಸಿದ್ದೀರಿ.

ಅಲ್ಲದೆ ರಾಷ್ಟ್ರೀಯ ಮಹಿಳಾ ಆಯೋಗ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕುಷ್ಟಗಿಯಲ್ಲಿ ಒಂದು ಸ್ವತಂತ್ರ್ಯ ತನಿಖೆಯನ್ನು ನಡೆಸಿ ಅಪಾಧಿತ ನಾಲ್ವರ ಪೂರ್ವೇತಿಹಾಸ ಹಾಗೂ ಸ್ಥಳೀಯ ಅನೇಕ ಮಹಿಳೆಯರನ್ನು ಲೈಂಗಿಕವಾಗಿ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ತಯಾರಿಸಿದ ವರದಿಯನ್ನು ನೀವು ಗಣನೆಗೆ ತೆಗೆದುಕೊಂಡಿಲ್ಲ. ಈ ವರದಿಯನ್ನು ನೀವು 'ಏಕೆ ಸಾರ್ವಜನಿಕ ಗೊಳಿಸಿಲ್ಲ? ಪ್ರಕರಣಕ್ಕೆ ಸಂಬಂಧಿಸಿದ ಪ್ರತಿಭಟನೆಯ ಧ್ವನಿಗಳನ್ನೇಕೆ ಮೌನವಾಗಿರಿಸಿದ್ದೀರಿ? ಅಪಾಧಿತ ನಾಲ್ವರನ್ನು 'ಏಕೆ ಸ್ವತಂತ್ರವಾಗಿ ಬಿಟ್ಟಿದ್ದೀರಿ? ಇವರು ಮತ್ತಷ್ಟು ಅತ್ಯಾಚಾರ-ಕೊಲೆಗಳನ್ನು ಎಸಗಿ ಈಗಿನಂತೆ ಅಪರಾಧ ಗಳಿಂದ ಮುಕ್ತವಾಗಿರಲೆಂದೆ?

ತಾವೊಬ್ಬ ಜವಾಬ್ದಾರಿಯುತ ಜನಾಯಿತ ಸರ್ಕಾರಿ ಮುಖಂಡರಾಗಿ ಜನತೆಯ ಘನತೆ ಗೌರವಗಳನ್ನು ಎತ್ತಿ ಹಿಡಿಯುವಿರೆಂದು ನಂಬಿದ್ದೇವೆ. ಆದರೆ ದುದೃಷ್ಟವಶಾತ್ ತಾವು ಪರೋಕ್ಷವಾಗಿ ಮಹಿಳೆಯರ ಮೇಲೆ ನಡೆಯುವ ಸಾಮಾಜಿಕ ಅಪರಾಧಗಳಿಗೆ ಅಪ್ಪಣೆ ಕೊಡಿಸುವಂತಿದೆ. ನಿಮ್ಮ ಮಾನವತಾ ಶರಣಮ್ಮಳನ್ನು ಮೋಸಗೊಳಿಸಿದೆ— ಕರ್ನಾಟಕದ ಮಹಿಳೆಯರನ್ನು ದಂಗು ಪಡಿಸಿದೆ. ಮಾನ್ಯ ಮುಖ್ಯ ಮಂತ್ರಿಗಳೆ, ನಿಮ್ಮ ಆಡಳಿತ ಯಾವುದೇ ಕ್ಷುಲ್ಲಕ ಕನಿಷ್ಟ ರಾಜಕೀಯದಂದ ನ್ಯಾಯ ಹಾಗೂ ಮಾನವತೆಗೆ ಧಕ್ಕೆಯಾಗುವುದನ್ನು ನೀವು ಸಹಿಸುತ್ತೀರಾ? ಅಥವಾ ರಾಜ್ಯದ ಜನತೆಗೆ ಅದರಲ್ಲೂ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯಗಳ ಬಗ್ಗೆ ನೊಂದ ಧ್ವನಿಗಳನ್ನು ಆಲಿಸಿ ಅವರಿಗೆ ಸಿಗಬೇಕಿರುವ ಸರಳ ನ್ಯಾಯವನ್ನು ದೊರಕಿಸಿ ಕೊಡುವತ್ತ ಪ್ರಾಮಾಣಿಕ ಪ್ರಯತ್ನ ಮಾಡುತ್ತೀರಾ.? ಈ ನೊಂದ ಧ್ವನಿಗಳು ನಿವೇದಿಸುವ ಯಾವುದೇ ಸತ್ಯಾಂಶ ವಾಸ್ತವಾಂಶಗಳಿಗೆ ಸಾಕ್ಷ್ಯಾಧಾರಗಳು ಬೇಕೆ? ಪ್ರತ್ಯಕ್ಷದರ್ಶಿಗಳು ಬೇಕೆ?

**ಒಂದು ಸಾರ್ವಜನಿಕ ಮನವಿ :**

ಶರಣಮ್ಮಳಿಗೆ ಆಗಿರುವ ಅನ್ಯಾಯದ ಬಗ್ಗ ನಿಮಗೂ ಧ್ವನಿ ಎತ್ತಬೇಕೆನಿಸಿದ್ದಲ್ಲಿ ನಮ್ಮೊಂದಿಗೆ ಸೇರಿ. ಮಹಿಳೆ ಯರ ಮೇಲೆ ದೌರ್ಜನ್ಯ ಎಸಗುವ ಹಾಗೂ ಹೀನಾಯ ಗೊಳಿಸುವ ಅಧಿಕಾರಿಗಳ ವಿರುದ್ಧ ಸಾರ್ವಜನಿಕ ಜಾಥಾ ನಡೆಸೋಣ.

ನಿಮ್ಮ ಪ್ರತಿಭಟನೆಗಳನ್ನು ಮುಖ್ಯ ಮಂತ್ರಿಗಳಿಗೆ ಕಳಿಸಿ. ಅಪಾಧಿತ ಮೂವರು ಸರ್ಕಾರಿ ಅಧಿಕಾರಿಗಳ ಮೇಲೆ ನಿಷ್ಟುರ ಕ್ರಮ ಜರುಗಿಸುವಂತೆ ಒತ್ತಾಯಿಸಿ-ಅಪಾಧಿತ ರನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗಾಯಿ ಸುವುದರಿಂದ ಯಾವುದೇ ನ್ಯಾಯ ದೊರಕದು. ಅವರಿಗೆ ಹೊಸ ಜಾಗದಲ್ಲಿ ಹೊಸ ಬಲಿಪಶುಗಳನ್ನು ಹುಡುಕಿ ಕೊಳ್ಳಲು ಅವಕಾಶ ಮಾಡಿಕೊಟ್ಟಂತಾಗುತ್ತದೆ ಅಷ್ಟೇ ಎಂದು ಮುಖ್ಯಮಂತ್ರಿಗಳಿಗೆ ತಿಳಿ ಹೇಳಿ.

ಅಪಾಧಿತ ನಾಲ್ವರು ತಾವು ನಿರಪರಾಧಿಗಳು ಎಂಬ ದೃಢ ನಂಬಿಕೆ ಇದ್ದಲ್ಲಿ ತಮ್ಮ ರಾಜಕೀಯ ಶ್ರೀರಕ್ಷೆಯಿಂದ ಹೊರಬಂದು ಜನತಾ ನ್ಯಾಯಾಲಯ–ಮಹಿಳಾ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ನಿರಪರಾಧಿತ್ವ ವನ್ನು ಸಾಬೀತುಗೊಳಿಸಲಿ. ಈ ನ್ಯಾಯಾಲಯದಲ್ಲಿ ಪರೀಕ್ಷೆಗೆ ಗುರಿಪಡುವುದು ಸತ್ತ ಶರಣಮ್ಮಳ ನೀತಿ-ನಡತೆ ಗಳಲ್ಲ; ಬದಲಾಗಿ ಈ ಅಪಾಧಿತ ನಾಲ್ವರ ನೀತಿ-ನಡತೆ ಗುಣಗಳು ಏಕೆಂದರೆ ಈ ನಾಲ್ವರಿಗೂ ಕುಷ್ಟಗಿಯ ಬೀದಿ ಗಳಲ್ಲಿ ಓಡಾಡಲು ಇಂದು ಯಾವುದೇ ನೈತಿಕ ಹಕ್ಕು ಉಳಿದಿಲ್ಲ.

ಇಂದು ಕುಷ್ಟಗಿಯ ಶರಣಮ್ಮಳಿಗಾಗಿರುವ ದುರಂತ ಮುಂದೆ ಯಾವುದೇ ಮಹಿಳೆಗೆ ಆಗದಿರಲಿ ಎಂಬುದಕ್ಕಾಗಿ ಮಹಿಳೆಯರಿಗೆ ರಕ್ಷಣ ನೀಡಬೇಕೆಂದು ಸರ್ಕಾರವನ್ನು ಒತ್ತಾಯಿಸಲು ಮತ್ತು ಕುಷ್ಟಗಿಯ ಶರಣಮ್ಮಳ ಘಟನೆಯ ತನಿಖೆಯನ್ನು ತಕ್ಷಣ ಸಿ.ಬಿ.ಐ.ಗೆ ವಹಿಸಬೇಕು ಮತ್ತು ಮಹಿಳೆಯರ ಮಧ್ಯೆ ಕೆಲಸ ಮಾಡುತ್ತಿರುವ ಸ್ವಯಂ ಸೇವಾ ಸಂಸ್ಥೆಗಳ ಹಾಗೂ ರಾಜಕೀಯೇತರ ಸ್ವತಂತ್ರ ವ್ಯಕ್ತಿಗಳ ನೇತೃತ್ವದ ಒಂದು ಸಮಿತಿ ಮೂಲಕ ತನಿಖೆ ನಡೆಸಿ ಸತ್ಯಾಂಶವನ್ನು ಬಯಲಿಗೆ ತಂದು ಅಪರಾಧಿ ಗಳನ್ನು ಶಿಕ್ಷಿಸಬೇಕೆಂದು ಒತ್ತಾಯಿಸಲಿಕ್ಕಾಗಿ ಮುಖ್ಯ ಮಂತ್ರಿಗಳಿಗೆ ಬರೆದಿರುವ ಈ ಬಹಿರಂಗ ಪತ್ರಕ್ಕೆ ರಾಜ್ಯದ 5 ಲಕ್ಷ ಮಹಿಳೆಯರ ಸಹಿ ಸಂಗ್ರಹ ನಡೆಸಲು. ಎಚ್.ಎಂ.ಕೆ.ಪಿ.ಗೆ ಸೇರ್ಪಡೆಗೊಂಡಿರುವ ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತೆಯರ ಮತ್ತು ಸಹಾಯಕಿ ಯರ ಸಂಘ. ವಿಮೋಚನಾ ಮಹಿಳಾ ಸಂಘಟನೆ ಹಾಗೂ ಸಿಯೆಡ್ಸ್ ಕಲೆಕ್ಟೀವ್ ತೀರ್ಮಾನಿಸಿವೆ.

ಆದ್ದರಿಂದ ಈ ಪತ್ರಕ್ಕೆ ಸಹಿ ಹಾಕುವ ಮೂಲಕ ನೀವೂ ಈ ಆಂದೋಲನದಲ್ಲಿ ಪಾಲ್ಗೊಳ್ಳಿ. ಇತರ ಮಹಿಳೆಯರಿಗೂ ಈ ಪತ್ರಕ್ಕೆ ಸಹಿ ಮಾಡಲು ತಿಳಿಸಿರಿ. ಕರ್ನಾಟಕ ರಾಜ್ಯದ ಮಹಿಳೆಯರ ಈ ಹೋರಾಟವನ್ನು ಯಶಸ್ವಿಗೊಳಿಸಿರಿ.

# ಗಂಡನ ಕ್ರೂರತನಕ್ಕೆ ಬಲಿಯಾದ ಚೇತನ

ಎಚ್. ಎಸ್. ಸಿ.

ಚೇತನ....ಹೆಸರಿಗೆ ತಕ್ಕಂತೆ ಚೈತನ್ಯದಿಂದ ಕೂಡಿದ 32 ವಯಸ್ಸಿನ ಸುಂದರ ಹೆಣ್ಣು. ಎಲ್ಲಾ ಮಧ್ಯಮ ವರ್ಗದವರ ಹೆಣ್ಣು ಮಕ್ಕಳ ಬದುಕಿನ ಕನಸಿನ ಹಾಗೆ ಇವಳ ಕನಸೂ ಮದುವೆಯೊಂದಿಗೆ ತಳುಕು ಹಾಕಿಕೊಂಡಿದ್ದವು. ಜೀವನದ ಸಂಭ್ರಮ ಸಂತೋಷಗಳೆಲ್ಲ ಮದುವೆಯಲ್ಲಿಯೋ,ಗಂಡ-ಹೆಂಡತಿಯ ಸಂಬಂಧದಲ್ಲಿಯೋ ಇರುತ್ತವೆ ಎಂಬ ಭ್ರಮೆಯಿದ್ದ ಹುಡುಗಿ, ಜೀವನದ ಅರ್ಥ, ಪರಮ ಸತ್ಯ ಇದರಲ್ಲಿಯೇ ಅಡಕವಾಗಿದೆ ಎಂಬ ಆದರ್ಶಗಳ ಸಂಬಿದ್ದ ಹುಡುಗಿ ಗಂಡನ ಕಟುಕತನಕ್ಕೆ ಬಲಿಯಾಗಿ ಮೇ 13ರಂದು ಸುಟ್ಟು ಭಸ್ಮವಾದಳು. ಅಮ್ಮನ ರಕ್ಷಣೆಗೆಂದು ಧಾವಿಸಿರಬಹುದಾದ ಅಥವಾ ಅಮ್ಮನ ಸಾವಿಗೆ ಮೂಕ ಸಾಕ್ಷಿಯಾಗಿರಬಹುದಾದ ಐದು ವರ್ಷದ ಮಹಾವೀರ ಕೂಡಾ ಅಪ್ಪನ ಕಟುಕತನಕ್ಕೆ ಬಲಿಯಾದ.

ಚೇತನ ಹಾಸನದ ಮಾಜಿ ಎಂ. ಎಲ್. ಎ. ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಜ್ವಾಲನಯ್ಯ ಅವರ ಮಗಳು. 1987ರಲ್ಲಿ ಬಳ್ಳಾರಿಯ ಪ್ರತಿಷ್ಠಿತ ಶಾಲೆಯಾದ 'ಮಕ್ಕಳ ಮಂಟಪ' ವ್ಯವಸ್ಥಾಪಕನಾದ ಪಾರ್ಶ್ವನಾಥದೊಂದಿಗೆ ಈಕೆಯ ಮದುವೆಯಾಯಿತು. ಮದುವೆಯಾದ ಮೇಲೆ ಮೂರು ತಿಂಗಳು ಮಾತ್ರ ಚೇತನ ಗಂಡನ ಮನೆ ಬಳ್ಳಾರಿಯಲ್ಲಿದ್ದದು. ಅತ್ತೆ/ನಾದಿನಿ/ಗಂಡ ಇವರ ಕಿರುಕುಳ ವಹಿಸಲಾರದೇ ಮೂರು ತಿಂಗಳಲ್ಲಿಯೇ ಈಕೆ ಅವರ ಮನೆಗೆ ವಾಪಸ್ಸು ಬಂದಳು. ಹುಟ್ಟಿದ ಮಗು ಮಹಾವೀರನಿಗೆ 5 ತಿಂಗಳಾಗುವ ತನಕ ವಾಪಸ್ಸು ಬಳ್ಳಾರಿಗೆ ಹೋಗಲೇ ಇಲ್ಲ. ಗಂಡ ಪಾರ್ಶ್ವನಾಥನೇ ಆಗೀಗ ಬೆಂಗಳೂರಿಗೆ ಬಂದು ಹೋಗುವುದಿತ್ತು. ಮಗುವಿಗೆ 5 ತಿಂಗಳಾದಾಗ ಗಂಡ ಬಳ್ಳಾರಿಗೆ ಕರೆದೊಯ್ದಾಗ ಚೇತನ ಬದಲಾಗಬಹುದಾದ ಗಂಡನ ವ್ಯಕ್ತಿತ್ವದ ಆಸೆ ಹೊತ್ತು ಬಳ್ಳಾರಿಗೆ ನಡೆದಳು. ಆದರೆ ಈ ಬಾರಿಯೂ ಆಕೆಗೆ ಅಲ್ಲಿ ಇರಲು ಸಾಧ್ಯವಾದುದು ತಿಂಗಳು ಮಾತ್ರ. ಈ ಬಾರಿ ಚೇತನ ಮರಳಿ ಹೋಗುವುದಿಲ್ಲವೆಂದು ನಿರ್ಧರಿಸಿಯೇ ಬಂದಿದ್ದಳು. ಬೆಂಗಳೂರಿನಲ್ಲಿಯೇ ಸಾಲಿಡಾರ್, ಡಯೋನಾರ ಮುಂತಾದ ಕಡೆ ಕೆಲಸಕ್ಕೆ ಸೇರಿಕೊಂಡಳು. ಪ್ರೀತಿಯ ತಂಗಿ/ತಾಯಿ/ತಂದೆಯರ ನಡುವೆ, ಇರುವ ಮಗನೊಡನೆ ಒಡೆದುಹೋದ ಭಾವನೆಗಳು, ಬದುಕನ್ನು ಕೂಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಗಂಡನಿಗೆ ಅದೂ ಬೇಕಾಗಿರಲಿಲ್ಲ. ಆಕೆ ಸ್ವತಂತ್ರವಾಗಿ ಅವಳ ಪಾಡಿಗೆ ಇರುವುದನ್ನೂ ಅವನಿಂದ ಸಹಿಸಲಾಗಲಿಲ್ಲ. ಈಗ ಎಂಟು ತಿಂಗಳ ಹಿಂದಷ್ಟೇ ಬಂದು ಆಕೆಯನ್ನು ರಮಿಸಿ, ಮತ್ತೆ ಸಂಭ್ರಮ/ಸಂತೋಷದಿಂದ ಬದುಕುವ ಕನಸುಗಳ ಹೆಣೆದು ಆಕೆಯನ್ನು ಬಳ್ಳಾರಿಗೆ ಕರೆದೊಯ್ದ. ಮತ್ತೆ ಚೇತನಾಳಲ್ಲಿ ಆಸೆ ಚಿಗುರಿತು. ಸ್ವತಂತ್ರ್ಯವಾಗಿ, ಸ್ವಾವಲಂಬಿಯಾಗಿ ಇರುವ ಮಗನೋರ್ವನ ಸುತ್ತ ಬದುಕ ರೂಪಿಸಿಕೊಳ್ಳಲು ಮೂರು ವರ್ಷ ಬೆಂಗಳೂರಿನಲ್ಲಿ ಹೋರಾಡಿದ ಚೇತನ ಮತ್ತೆ ಆತನ ಕನಸುಗಳ ಕೋಟೆಗೆ ಬಲಿಯಾದಳು. ತಾರುಣ್ಯದ ಆಸೆಗಳು ಎದೆಯಲ್ಲಿ ಮತ್ತೆ ಚಿಗುರೊಡೆದವು. ಗಂಡ ಬದಲಾಗಿರಬಹುದು ಅಥವಾ ಬದಲಾಯಿಸಿ ಅವನೊಡನೆ ಸಂಸಾರ ಮಾಡುತ್ತೇನೆ ಎಂಬ ಆದರ್ಶ ಹೊತ್ತು ಗಂಡನೊಟ್ಟಿಗೆ ಹೋದಳು. ಈ ಎಂಟು ತಿಂಗಳ ಅವಧಿಯಲ್ಲಿ ಚೇತನ ಹಲವಾರು ಪತ್ರಗಳನ್ನು ತನ್ನ ತಂಗಿ ರಂಜನಿಗೆ ಬರೆದಿದ್ದಾಳೆ. ತನ್ನ ಬದುಕು ಸರಿಹೋಗುತ್ತದೆ, ಕಾದು, ಕಾಲದ ಸಂದರ್ಭದಲ್ಲಿ ಈತನನ್ನು ಸರಿ ಮಾಡುತ್ತೇನೆ ಎಂಬ ಆಶಯ ಹೊತ್ತ ಪತ್ರಗಳು ಅವು. ಜೀವನದಲ್ಲಿ ತಾನು ಹೇಡಿಯಾಗಲಾರೆನೆಂದು ಅರುಹಿದ ಪತ್ರಗಳು. ಇಂತಹದೇ ಒಂದು ಕಾಗದವನ್ನು ಮೇ 13ರಂದೇ ಚೇತನ ಬರೆದು ತಂಗಿಗೆ ಪೋಸ್ಟ್ ಮಾಡಿದ್ದಾಳೆ.

ಮೇ 13ರಂದು ಬೆಳಿಗ್ಗೆ 10.30 ಘಂಟೆಗೆ ಬಳ್ಳಾರಿಯಿಂದ ಫೋನ್ ಮಾಡಿದ ಚೇತನ ಅಮ್ಮನೊಡನೆ ಮಾತನಾಡಬೇಕು ಎಂದಳು. 'ಅಮ್ಮನಿಗೇ ಫೋನ್ ಮಾಡಲು ತಿಳಿಸಿ' ಎಂದು ಫೋನ್ ಕೆಳಗಿಟ್ಟುಬಿಟ್ಟಳು. ತಾಯಿ 12. 30ರಷ್ಟು ಹೊತ್ತಿಗೆ ಮಗಳ ಮನೆಗೆ ಫೋನಿಸಿದರು. ಫೋನ್‌ನಲ್ಲಿ 'ತಂಗಿ ರಂಜನಾ ಬಳ್ಳಾರಿಗೆ ಬರುವುದು ಬೇಡ' ಎಂದು ಹೇಳಿದ ಚೇತನಾ 'ನನ್ನ ಯಜಮಾನರು ಮನೇಲಿಲ್ಲ,

ಆಮೇಲೆ ಫೋನ್ ಮಾಡಿ' ಎಂದು ಇದ್ದಕ್ಕಿದ್ದ ಹಾಗೆ ಫೋನ್ ಕೆಳಗಿಟ್ಟುಬಿಟ್ಟಳು. ಗಂಡ/ಅತ್ತೆ/ನಾದಿನಿಯ ದುರ್ವರ್ತನೆಯ ಅರಿವಿದ್ದ ತಾಯಿ ಅವರ್‍ಯಾರಾದರೂ ಮನೇಲಿದ್ದರೆ ಮಗಳು' ರಾಂಗ್ ನಂಬರ್'ಎಂದು ಹೇಳಿ ಮಗಳು ಫೋನ್ ಕೆಳಗಿಡುವ ಅಭ್ಯಾಸ ಅರಿತಿದ್ದರು. ಆದರೆ ಇಂದು ಆಕೆಫೋನ್ ಕೆಳಗಿಟ್ಟ ರೀತಿ ತಾಯಿಗೆ ಆಶ್ಚರ್ಯವಾಯಿತು. ಮತ್ತೆ ಸ್ವಲ್ಪ ಸಮಯದ ನಂತರ ಫೋನ್ ಮಾಡಲು ತಾಯಿ ನಿರ್ಧರಿಸಿದರು.

ಆದರೆ ತಾಯಿ ಮತ್ತೆ ಫೋನಿಸುವ ವೇಳೆಗೆ ಚೇತನ ಈ ಲೋಕವನ್ನೇ ತ್ಯಜಿಸಿಯಾಗಿತ್ತು. ತುಟಿಯ ಮೇಲೆ ಎದೆಯ ಯಾವ ಮಾತುಗಳನ್ನಿಟ್ಟುಕೊಂಡು ಸತ್ತಳೋ ಎಂದು ಕೊರಗುತ್ತಾರೆ ತಾಯಿ. 2.30ರ ವೇಳೆಗೆ ಯಾರೋ ಫೋನ್ ಮಾಡಿ ಚೇತನ ಮತ್ತೆ ಮಗು ಸ್ಟೋವ್ ಬರ್ಸ್ಟ್ ಆಗಿ ಸತ್ತು ಹೋದರು ಎಂದು ಹೇಳಿದರು. ತಾಯಿಯ ಎದೆಗೆ ಬರ ಸಿಡಿಲು ಎರಗಿತ್ತು. ಅವರು ಅಲ್ಲಿಯೇ ಕುಸಿದರು. 12.30ರ ಹೊತ್ತಿಗೆ ಏನೋ ಮಾತನಾಡಲು ಅಪೇಕ್ಷಿಸಿದ ಚೇತನ, ಮತ್ತೆ ಫೋನ್ ಮಾಡಿ ಎಂದು ಹೇಳಿದ ಚೇತನ 2.30ರ ಹೊತ್ತಿಗೆ, ಅಂದರೆ 100ನಿಮಿಷಗಳ ಅವಧಿಯಲ್ಲಿ ಸತ್ತು ಸುಟ್ಟು ಕರಕಲಾದ ಚೇತನಾಳ ಕತೆ ಇಂದು ಆಕೆಯ ತಾಯಿಯ ಹೃದಯವನ್ನು ಅಲ್ಲೋಲ ಕಲ್ಲೋಲವಾಗಿಸಿದೆ. ಪೋಸ್ಟ್ ಮಾರ್ಟಂ ವರದಿಯ ಪ್ರಕಾರ ಚೇತನಾಳನ್ನು ಕತ್ತು ಹಿಸುಕಿ ಕೊಂದು ಅನಂತರ ಬೆಂಕಿ ಹಚ್ಚಲಾಗಿದೆಯೆಂದೂ, ಮಗ ಮಹಾವೀರನನ್ನೂ ಕತ್ತು ಹಿಸುಕಿ ಕೊಲೆ ಮಾಡಲಾಗಿದೆಯೆಂದೂ ಧೃಡಪಡಿಸಲಾಗಿದೆ. ಅಂದು ಆಕೆ ಫೋನ್ ಎತ್ತಿಕೊಂಡ ಹೊತ್ತಿಗೆ ಮನೆಗೆ ಬಂದಿರಬಹುದಾದ ಆಕೆಯ ಗಂಡ ಏನೋ ವಿರಸದಿಂದ ಆಕೆಯ ಮುಖದ ಮೇಲೆ ಬಟ್ಟೆ ಹಾಕಿ ಉಸಿರುಗಟ್ಟಿಸಿ ಸಾಯಿಸಿ ನಂತರ ಮಗನನ್ನು ಕತ್ತು ಸಾಯಿಸಿರಬೇಕೆಂದು ಪೋಲೀಸ್ ಮೂಲಗಳು ತಿಳಿಸಿವೆ. ಆತ್ಮಹತ್ಯೆ ಎಂದು ಕಾಣಲೆಂದು ನಂತರ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದ್ದಾನೆ. ಇದಾದ ನಂತರದಲ್ಲಿ ಪಾರ್ಶ್ವನಾಥ ಪೋಲೀಸ್ ಸ್ಟೇಷನ್‌ಗೆ ಹೋಗಿ ಆತ್ಮಹತ್ಯೆ ಮಾಡಿಕೊಂಡು ತನ್ನ ಹೆಂಡತಿ, ಮಗ ಸತ್ತಿದ್ದಾರೆ ಎಂಬ ಹೇಳಿಕೆ ಕೊಟ್ಟ. ಆದರೆ ಈ ವೇಳೆಗಾಗಲೇ ಆತನೇ ಹೊಡೆದು ಸಾಯಿಸಿದ್ದು ಎಂದು ಮನೆಯ ಅಕ್ಕಪಕ್ಕದವರಿಗೆಲ್ಲಾ ತಿಳಿದ ವಿಷಯವಾಗಿತ್ತು. ಹಾಗಾಗಿ ಅಷ್ಟು ಸುಲಭವಾಗಿ ಆತ ಪೋಲೀಸರ ಕೈಯಿಂದ, ಕಾನೂನಿನ ಕೈಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಗಗನ ದೀಪ ರವರು ಈಗಾಗಲೇ ಪಾರ್ಶ್ವನಾಥನನ್ನು ಬಂಧಿಸಿ ಪೋಲೀಸ್ ಕಸ್ಟಡಿಯಲ್ಲಿಯೇ ಇಟ್ಟಿದ್ದಾರೆ. ಸುಲಭವಾಗಿ ಕೊಂದು, ಸುಲಭವಾಗಿ ತಪ್ಪಿಸಿಕೊಳ್ಳಬಹುದು ಎಂದು ಎಣಿಸಿದ ಪಾರ್ಶ್ವನಾಥನ ವಿರುದ್ಧವೇ ಎಲ್ಲಾ ಸಾಕ್ಷಿಗಳೂ ಇವೆ. ಸುಟ್ಟ ಹೆಣದ ಮೇಲೆ ಬೊಬ್ಬೆ ಇಲ್ಲದಿರುವುದು, ಹೆಣದ ಸ್ವಲ್ಪವೇ ಭಾಗ ಬೆಂದಿರುವುದು, ಇಂತಹವುಗಳೆಲ್ಲಾ ಚೇತನ ಸತ್ತಿರಬಹುದಾದ ರೀತಿಯನ್ನು ಸಾರಿ ಸಾರಿ ಹೇಳುತ್ತವೆ. ಈಗಾಗಲೇ ಈತ ತಪ್ಪಿತಸ್ಥನೆಂದು ಈತನ ವಿರುದ್ಧ ಕ್ರಮ ಜರುಗಿಸಲಾಗಿದೆ. ಸಾಮಾಜಿಕ ಬಹಿಷ್ಕಾರ, ಹಾಗೂ ಕಾನೂನಿನ ಕಠಿಣ ಶಿಕ್ಷೆ ಇಂತಹ ಅಮಾನವೀಯ ವ್ಯಕ್ತಿಗಳಿಗೆ ಪಾಠ ಕಲಿಸಬಹುದು ಅಷ್ಟೆ.

ಚೇತನ ಕೊನೆಯ ಬಾರಿ ಬಳ್ಳಾರಿಗೆ ಹೋಗುವಾಗ ಅಕೆಯ ತಾಯಿ ತುಂಬಾ ಅಳುತ್ತಿದ್ದಳು. ಹಾಗೆ ಅಳಬಾರದೆಂದು ಹೇಳಿದ ಚೇತನ ತನ್ನ ಬದುಕು ಸುಂದರವಾಗುವುದು, ಗಂಡನೊಟ್ಟಿಗೆ ತಾನು ಸುಖವಾಗಿರುವುದು ಅವರಿಗಿಷ್ಟವಿಲ್ಲವೆ ? ಎಂದು ತಾಯಿಯನ್ನು ಸಮಾಧಾನಿಸಿದ್ದಳು, ಮಗು ಮಹಾವೀರರಿಗೆ 'ಅಜ್ಜಿಗೆ ನಮಸ್ಕಾರ ಮಾಡು, ಅವರು ಹರಸಿದರೆ ಒಳ್ಳೆಯದಾಗುತ್ತದೆ' ಎಂದಿದ್ದಳು. ತಾಯಿಯ ಆಶೀರ್ವಾದ ಆಕೆಯನ್ನು ಕಾಪಾಡಲಿಲ್ಲವೆಂಬುದಷ್ಟೇ ಚೇತನಳ ತಾಯಿಗುಳಿದಿರುವ ನೆನಪು

**ಸೌಗಂಧಿಯ ಸ್ವಗತಗಳು**

'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ'-ಯಿಂದ
ಲೇಖಕಿ : ವೈದೇಹಿ
ಅಕ್ಷರ ಪ್ರಕಾಶನ 1991

...ತಾನು ಉದ್ಯೋಗಸ್ಥೆ. ಒಬ್ಬಳೇ ಬಾಳಬಲ್ಲೆ. ಯಾರ ಹಂಗಿಲ್ಲದೆ ತಾಳಿಯ ನೇಣು ಬಿಗಿಸಿಕೊಳ್ಳದೆ. ಯಾರಿಲ್ಲದ ಮನೆಯಲ್ಲಿ ತಪ್ಪಿ ಹಾರಿ ಬಂದ ಏಳು ಕೋಟೆಯಾಚೆಯ ಅರಮನೆಯ ಗಿಣಿ ನಾನು. ಅಂತೆಲ್ಲ ಸೌಗಂಧಿ ಕೂಡಾ ಅಂದುಕೊಳ್ಳುತ್ತಾಳೆ. ಆಫೀಸಿನ ಅಂಜಲಿ ಇಲ್ಲವೆ! ಅವಳ ಕಣ್ಣುಗಳಲ್ಲಿ ಎಂತಹ ಧೈರ್ಯ, ಆತ್ಮವಿಶ್ವಾಸ ! ಮದುವೆಯೆಂಬುದು ಅನಿವಾರ್ಯವಲ್ಲ ಸೌಗಂಧೀ ಎಂದೆಲ್ಲ ಅವಳು ದೃಢವಾಗಿ ತಿಳಿತಿಳಿಯಾಗಿ-ಹೇಳುವಾಗ ತನಗೂ ಹೌದಂತಲೇ ಕಾಣುತ್ತದೆ ಕೂಡ. ಗಂಡಿಲ್ಲದೇ ಬದುಕಲು ಸಾಧ್ಯವಿಲ್ಲವೇ ? ಖಂಡಿತಾ ಸಾಧ್ಯವಿದೆ ಅಂತೆಲ್ಲ ಅನಿಸುತ್ತದೆ. ಆದರೆ ಅದು ಅಕೆ ಹೇಳುವ ಹಾಗೆ ಗಳಿಗೆ ಮಾತ್ರ; ಮರುಕ್ಷಣ ತಾನು ಸೋಲುತ್ತೇನೆ.' ಸೋಲುತ್ತಿದ್ದೇನೆ ಎಂಬುದು ಅವಳಿಗೆ ತಿಳಿಯದಂತೆ ನಟಿಸುತ್ತೇನೆ !

ಅವಳೇಕೆ ಅಷ್ಟು ದೃಢ, ಸ್ವತಂತ್ರ ! ತಾನೇಕೆ ಹೀಗೆ ? ಅವರವರ ಮನೋಮಿತಿಗೊಳಪಟ್ಟ ವಿಚಾರಗಳೇ ಇವೆಲ್ಲ? ಕೇಳಿದರೆ ಅಂಜಲಿ ಹೇಳುತ್ತಾಳೆ, "ಮನಸ್ಸಿಗೆ ಮಿತಿಯೆಂಬುದಿಲ್ಲ. ಅದನ್ನು ಹಿಗ್ಗಿಸಿಕೊಳ್ಳುವುದು ಸಂಕುಚಿಸಿಕೊಳ್ಳುವುದೂ ನಮ್ಮ ಕೈಯಲ್ಲೇ ಇದೆ". "ಇಲ್ಲ ಅಂಜಲಿ, ನನ್ನ ಮನಸ್ಸು ಮರಗಟ್ಟಿದೆಯೇನೋ. ಅದು ಹಿಗ್ಗುವುದೂ ಇಲ್ಲ. ಕುಗ್ಗುವುದೂ ಇಲ್ಲ, ಜಡಗಟ್ಟಿದೆಯೇ–ನೀನೇ ನೋಡು."–ಹೀಗೆಂತ ತೆರೆದುಕೊಳ್ಳಲೂ ಸಾಧ್ಯವಾಗದ ಸೌಗಂಧಿ ದಣಿಯುವಳು. ಅವಳಂತಿರಲು ಬಯಸಿದರೂ ಮನಸ್ಸು ಏಕೆ ಸಹಕರಿಸುತ್ತಿಲ್ಲ ? ಬದಲು ಏನೇನೋ ಬೇಡುತ್ತದೆ. ತನ್ನನ್ನು ಲೆಕ್ಕಕ್ಕೇ ಇಡದೆ ಆಸೆಗಳನ್ನು ಗುಣುಗುಣಿಸುತ್ತದೆ. "ನಾಲ್ಕು ಜೋರಾಗಿ ಗದರಿಕೊಂಡರೆ, ಮಂಕಾಗಿ ಎಲ್ಲ ಕಳೆದವರಂತೆ ಮುಚ್ಚಿ ಹಾಕಿಕೊಂಡು ಮಲಗಿ ಬಿಡುತ್ತದೆ. ಆಗ ಕನಸುಗಳೂ ಬೀಳುವುದಿಲ್ಲ !

ಅಂಜಲೀ, ಕಡೇ ಪಕ್ಷ ನನಗೆ ಕನಸುಗಳಾದರೂ ಇರಲಿ. ಕನಸುಗಳಲ್ಲಿ ಹಾಲಿನವನೂ ಹಣಕುತ್ತಾನೆ. ಸಂಭಾವಿತತನ ಬಿಟ್ಟು–ಗೊತ್ತೇ ? ಮತ್ತೆ ಎಲ್ಲೋ ಕಂಡ ಆ ಕಂಡಕ್ಟರನೂ, ನನ್ನ ಪಕ್ಕದಲ್ಲಿ ಕುಳಿತುಕೊಳ್ಳದೇ ಹೋದ ಕ್ರಾಪಿನವನೂ....ಮತ್ತು ಯಾರು ಯಾರೆಲ್ಲ ; ಹೇಗಲ್ಲ ವಿವರಿಸಲಿ ?...ಆಫೀಸಿನ ಕೆಲ ಕಣ್ಣುಗಳು....ಅವು ನಿನಗೂ ಗೊತ್ತು....ಕನಸುಗಳ ಸ್ವರೂಪವೇ ವಿಚಿತ್ರವಷ್ಟೇ ? ಯಾರದೋ ದೇಹಕ್ಕೆ ಯಾರದೋ ತಲೆ, ಯಾರದೋ ಹುಬ್ಬಿಗೆ ಯಾರದೋ ಕಣ್ಣು ! ಬೇಕೆನಿಸಿದಂತೆ ಕಲಸಿಕೊಳ್ಳುವ ಈ ಲೋಕ ಎಷ್ಟು ಸುಖ ಎನ್ನುತ್ತೀ ! ದಯವಿಟ್ಟು ಅದಕ್ಕೂ ನನ್ನ ಬುದ್ಧಿಗೂ ಗಂಟು ಹಾಕಬೇಡವೇ....ಹೇಳು ಅಂಜಲೀ, ನಿನ್ನನ್ನಲ್ಲವೇ ಇಂತಹ ಕಲಸು ಕನಸುಗಳು ?!" ಈಗೀಗ ಸೌಗಂಧಿಯ ಸ್ವಗತಗಳು ಹೆಚ್ಚುತ್ತವೆ.

ಬೆಳಿಗ್ಗೆ ಹೋಗುವಾಗ ದಪ್ಪ ಕೈ ಮಗ್ಗದ ಸೀರೆಯನ್ನು ಬೇಕೆಂದೇ ಕೋಣೆಯೊಳಗಿನ ನೇಲೆಯ ಮೇಲೆ ಹರವುವಳು. ಅಡಗಿಕೊಳ್ಳುವವರಿಗೊಂದು ಜಾಗ ಕಲ್ಪಿಸುವಂತೆ ಮತ್ತೆ ತಾನು ಹಾಗೆ ಮಾಡುತ್ತಿರುವುದು ತನಗೂ ಗೋಪ್ಯದ ವಿಷಯವೆಂಬಂತೆ ಗಪ್ ಚಿಪ್ಪಿನಲ್ಲಿ.

ಮರ್ಯಾದಸ್ತ ಮನೆಯವಳು ತಾನು. ಮರ್ಯಾದೆ ಬಿಡುವ ತಾಕತ್ತಿಲ್ಲದವಳು. ಯಾರಾದರೂ ತೆಗೆಯಬೇಕಷ್ಟೇ. ತನಗೀಗ ಅನುಭವ ಬೇಕು. ಆವರಣದ ಕಾಪಟ್ಯ ಕಳೆಯಬೇಕು. ಅನಾವರಣಗೊಳ್ಳಬೇಕು–ಹೇಗೆಂದರೆ ಯಾರೂ ತನ್ನ ಬಗ್ಗೆ ಕೆಟ್ಟೆಣಿಸದಂತೆ. ಆದರೆ "ಹೋ...ನೋಡಿ ನಿಮ್ಮೆದುರೇ ಬೀದಿಯಲ್ಲಿ ಸೌಗಂಧೀ ಎಂಬ ಹೆಣ್ಣೊಬ್ಬಳು ಹೋಗುತ್ತಿದ್ದಾಳೆ. ಕೂಡಿಕೊಳ್ಳುವ ತಾಕತ್ತುಂಟೇ ಯಾರಿಗಾದರೂ ?"–ಎಂದು ಕೇಳುವಂತಿಲ್ಲವಲ್ಲ. ಕಾಶಿಯಂತಹ ಊರಿನಲ್ಲಿ ಕೂಡ ಘಟಿನಲ್ಲಿ ಹೆಣ್ಣಿನ ಮಾರಾಟ ಆಗಿರಬಹುದು. ಆದರೆ ಹೆಣ್ಣಿನ ಮಾನ ಮಾತ್ರ ಹರಾಜು. ಅವಳ ಅಪೇಕ್ಷೆ ಮೇರೆಗೆ, ಹೀಗೆ ಬಹಿರಂಗವಾಗಿ ಎಂದಾದರೂ ಆಗುವುದುಂಟೇ ?....ಕೇಳಿದವರು ಕಟಕ್ಕನೇ ಹೇಳಿಯಾರು-ಹೀಗೆಲ್ಲ ಅಪೇಕ್ಷಿಸುವವರೇ ಇಲ್ಲ–ಎಲ್ಲಿಯೂ ಅದೂ ಮರ್ಯಾದಸ್ತ ಕುಟುಂಬದಲ್ಲಿ ! ಎಂದು.

## ಓದುಗರಿಗೆ

'ಮಾನಸ'–ನಿಯತಕಾಲಿಕವಾಗಿ ತರಲು ನಮಗೆ ಸಾಧ್ಯವಾಗುತ್ತಿರುವುದೇ ನಿಮ್ಮೆಲ್ಲರ ಸಹಕಾರ ಹಾಗೂ ಬೆಂಬಲದಿಂದ. 'ಮಾನಸ'-ವನ್ನು ಬೆಳೆಸುವ ಜವಾಬ್ದಾರಿ ನಮ್ಮ ನಿಮ್ಮೆಲ್ಲರ ಮೇಲಿದೆ. ಮಹಿಳೆಯ ಧ್ವನಿಯಾಗಬಯಸುವ 'ಮಾನಸ'ದ ಉತ್ತಮ ಸಾಂಸ್ಕೃತಿಕ ಕೊಡುಗೆ ನಿಮ್ಮೆಲ್ಲರ ಸಹಕಾರದ ಮೇಲೆ ನಿಂತಿದೆ. ಮಹಿಳೆಯರಿಗೆ ಸಂಬಂಧಿಸಿದ ಉತ್ತಮ ಲೇಖನ/ಕವನ/ವಿಮರ್ಶೆ ಕಳುಹಿಸಿಕೊಡಿ, ಜೊತೆಗೆ ನೀವು ಚಂದಾ ನವೀಕರಿಸಿರದಿದ್ದಲ್ಲಿ, ಚಂದಾ ನವೀಕರಿಸುವುದರ ಮೂಲಕವೂ 'ಮಾನಸ'ದ ಬೆಳವಣಿಗೆಗೆ ಸಹಕರಿಸಿ.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067